# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಏಪ್ರಿಲ್ ೨೪, ೨೦೧೪ (ವೈಶಾಖ ೪, ಶಕ ವರ್ಷ ೧೯೩೬)<br>Bangalore, Thursday, April 24, 2014 (Vaishakha 4, Shaka Varsha 1936) | ಸಂಚಿಕೆ ೧೭<br>Issue 17 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ

**ಅಧಿಸೂಚನೆ**

**ನಂ. ಎಂಎಜಿ(2) ಸಿ.ಆರ್. 38/2013-14 (31786), ಬೆಂಗಳೂರು, ದಿನಾಂಕ : 30-01-2014.**

**ವಿಷಯ :** ಶಿವಮೊಗ್ಗ ನಗರದ ಡಾ॥ ಬಿ.ಆರ್. ಅಂಬೇಡ್ಕರ್ ವೃತ್ತ (ಜೈಲ್ ಸರ್ಕಲ್) ದಿಂದ ಲಕ್ಷ್ಮೀ ಟಾಕೀಸ್‌ವರೆಗೆ ಮತ್ತು 100 ಅಡಿ ರಸ್ತೆಯಿಂದ ಕುವೆಂಪು ರಸ್ತೆ ಕಡೆಗೆ ಬರುವ ರಸ್ತೆಗಳಲ್ಲಿ ಏಕಮುಖ ಸಂಚಾರ ವ್ಯವಸ್ಥೆ ಹಾಗೂ ಜೈಲು ರಸ್ತೆಯಲ್ಲಿ ಎರಡು ಬದಿಯಲ್ಲಿ ದಿನ ಬಿಟ್ಟು ದಿನ ವಾಹನ ನಿಲುಗಡೆ ಕುರಿತು ಅಧಿಸೂಚನೆ ಹೊರಡಿಸುವ ಬಗ್ಗೆ.

**ಉಲ್ಲೇಖ :**
1. ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಇವರ ಪತ್ರದ ಸಂಖ್ಯೆ : ಸಿ/230/ಡಿ.ಸಿ.ಆರ್.ಬಿ./2013 ದಿನಾಂಕ : 10-09-2013, 16-12-2013 ಹಾಗೂ 10-01-2014.
2. ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರ ಪತ್ರದ ಸಂಖ್ಯೆ : ಪ್ರಾ.ಸಾ.ಪ್ರಾ/ಏಕಮುಖ ಸಂಚಾರ/13-14, ದಿನಾಂಕ : 01-01-2014.

ಪೊಲೀಸ್ ಅಧೀಕ್ಷಕರು, ಶಿವಮೊಗ್ಗ, ಇವರು ಇತ್ತೀಚಿನ ದಿನಗಳಲ್ಲಿ ವಾಹನ ಸಂಚಾರ ಹೆಚ್ಚಾಗುತ್ತಿದ್ದು ಸಾರ್ವಜನಿಕ ಸುಗಮ ಸಂಚಾರಕ್ಕೆ ಅನುಕೂಲವಾಗುವಂತೆ ಹಾಗೂ ಸುರಕ್ಷತಾ ದೃಷ್ಟಿಯಿಂದ ಶಿವಮೊಗ್ಗ ನಗರದ ಡಾ॥ ಬಿ.ಆರ್. ಅಂಬೇಡ್ಕರ್ ವೃತ್ತ (ಜೈಲು ಸರ್ಕಲ್)ನಿಂದ ಲಕ್ಷ್ಮೀ ಟಾಕೀಸ್ ವರೆಗೆ ಮತ್ತು ರವೀಂದ್ರ ನಗರ 100 ಅಡಿ ರಸ್ತೆಯಿಂದ ಕುವೆಂಪು ರಸ್ತೆ ಕಡೆಗೆ ಬರುವ ರಸ್ತೆಗಳಲ್ಲಿ ಏಕಮುಖ ಸಂಚಾರ ವ್ಯವಸ್ಥೆ ಜಾರಿಗೊಳಿಸುವ ಬಗ್ಗೆ ಮತ್ತು ಡಾ॥ ಬಿ.ಆರ್. ಅಂಬೇಡ್ಕರ್ ವೃತ್ತ (ಜೈಲು ಸರ್ಕಲ್) ನಿಂದ ಎರಡು ಬದಿಯಲ್ಲಿ ದಿನ ಬಿಟ್ಟು ದಿನ ವಾಹನ ನಿಲುಗಡೆ ಕುರಿತು ಅಧಿಸೂಚನೆ ಹೊರಡಿಸಲು ಕೋರಿ ಪ್ರಸ್ತಾವನೆಯೊಂದಿಗೆ ನಕ್ಷೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆ ಕುರಿತು ಸಂಚಾರಿ ಪೊಲೀಸ್ ಅಧಿಕಾರಿಗಳು ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಶಿವಮೊಗ್ಗ ಇವರೊಂದಿಗೆ ಪರಿಶೀಲಿಸಿದೆ ಇತ್ತೀಚಿನ ದಿನಗಳಲ್ಲಿ ಡಾ॥ ಬಿ.ಆರ್. ಅಂಬೇಡ್ಕರ್ ವೃತ್ತದಿಂದ (ಜೈಲು ಸರ್ಕಲ್) ಲಕ್ಷ್ಮೀ ಟಾಕೀಸ್ ರಸ್ತೆಯಲ್ಲಿ ವಾಹನ ಸಂಚಾರವು ಅಧಿಕವಾಗಿದ್ದು ಪಾದಚಾರಿಗಳು ಓಡಾಡಲು ಹಾಗೂ ಸಂಚಾರ ವ್ಯವಸ್ಥೆ ಸುಗಮಗೊಳಿಸುವ ನಿಟ್ಟಿನಲ್ಲಿ ಮೋಟಾರು ವಾಹನ ಕಾಯ್ದೆ 1988 ಕಲಂ 115,116 ಹಾಗೂ 117 ರ ಅನ್ವಯ ಅನುಸೂಚಿಯಲ್ಲಿ ನಮೂದಿಸಿರುವಂತೆ ವಾಹನ ಸಂಚಾರ ನಿರ್ಬಂದಿಸಿ ಆದೇಶಿಸಿದೆ.

**ಅನುಸೂಚಿ**

1. ಡಾ॥ ಬಿ.ಆರ್. ಅಂಬೇಡ್ಕರ್ ವೃತ್ತ (ಜೈಲು ಸರ್ಕಲ್) ಕಡೆಯಿಂದ ಲಕ್ಷ್ಮೀ ಟಾಕೀಸ್ ವರೆಗೆ ಏಕಮುಖವಾಗಿ ಮಾತ್ರ ವಾಹನಗಳು ಸಂಚರಿಸುವುದು.
2. ಡಾ॥ ಬಿ.ಆರ್. ಅಂಬೇಡ್ಕರ್ ವೃತ್ತ (ಜೈಲು ಸರ್ಕಲ್) ಕಡೆಯಿಂದ ಲಕ್ಷ್ಮೀ ಟಾಕೀಸ್‌ವರೆಗೆ ರಸ್ತೆಯ ಎರಡೂ ಬದಿಯಲ್ಲಿ ದಿನಬಿಟ್ಟು ದಿನ ವಾಹನ ನಿಲುಗಡೆ ಮಾಡುವುದು.
3. ಡಾ॥ ಬಿ.ಆರ್. ಅಂಬೇಡ್ಕರ್ ವೃತ್ತ (ಜೈಲು ಸರ್ಕಲ್) ದಿಂದ ಲಕ್ಷ್ಮೀ ಟಾಕೀಸ್ ವರೆಗೆ ಸಿಟಿ ಬಸ್ ಹೊರತುಪಡಿಸಿ ಬಾರಿ ವಾಹನ ಸಂಚಾರ ವ್ಯವಸ್ಥೆಯನ್ನು ನಿಷೇದಿಸಿದೆ.
4. ವಾಸವಿ ಸರ್ಕಲ್ ನಿಂದ (ಕುವೆಂಪು ರಸ್ತೆ-ಕೆನರ ಬ್ಯಾಂಕ್ ವಿಭಾಗೀಯ ಕಛೇರಿ) ಗಾಂಧೀನಗರ ಮುಖ್ಯ ರಸ್ತೆಯಲ್ಲಿ 100 ಅಡಿ ರಸ್ತೆ ವರೆಗೆ ಎಲ್ಲಾ ವಾಹನಗಳ ಸಂಚಾರ ನಿಷೇಧಿಸಿದೆ.

5. ಗಾಂಧೀನಗರ ಮುಖ್ಯ ರಸ್ತೆಯಲ್ಲಿ 100 ಅಡಿ ರಸ್ತೆಯಿಂದ ವಾಸವಿ ಸರ್ಕಲ್ ವರೆಗೆ (ಕುವೆಂಪು ರಸ್ತೆ-ಕೆನರ ಬ್ಯಾಂಕ್ ವಿಭಾಗೀಯ ಕಛೇರಿ) ಬಾರಿ ವಾಹನ ಸಂಚಾರ ನಿಷೇಧಿಸಿದೆ.
6. ಡಾ॥ ಬಿ.ಆರ್. ಅಂಬೇಡ್ಕರ್ ವೃತ್ತ (ಜೈಲು ಸರ್ಕಲ್) ನಿಂದ ಲಕ್ಷ್ಮೀ ಟಾಕೀಸ್ ವರೆಗೆ ಬಾರಿ ಮತ್ತು ಲಘು ಲಗೇಜ್ ವಾಹನಗಳಿಗೆ ಮಧ್ಯಹ್ನ 2.00 ರಿಂದ 4.00 ಘಂಟೆಯವರೆಗೆ ಮತ್ತು ರಾತ್ರಿ 9.00 ಘಂಟೆಯಿಂದ ಬೆಳಗ್ಗೆ 9.00 ಘಂಟೆಯವರೆಗೆ ಲೋಡ್ ಮತ್ತು ಅನ್ ಲೋಡ್ ಮಾಡಲು ಅವಕಾಶ ನೀಡಿದೆ.

**ವಿಫುಲ್ ಬನ್ಸಲ್**
ಜಿಲ್ಲಾ ದಂಡಾಧಿಕಾರಿ,
ಶಿವಮೊಗ್ಗ ಜಿಲ್ಲೆ

**P.R. 186**
**SC-20**

## ಒಳಾಡಳಿತ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಒಇ 514 ಪಿಪಿಇ 2013, ಬೆಂಗಳೂರು, ದಿನಾಂಕ : 18-03-2014.**

ಶ್ರೀ ಕಿರಣ್ ಎಸ್. ಪಾಟೀಲ್, ಪ್ರಸ್ತುತ ಕಾನೂನು ಅಧಿಕಾರಿ (ಕಿರಿಯ), ಪೊಲೀಸ್ ತರಬೇತಿ ಶಾಲೆ, ಖಾನಾಪುರ ಇವರಿಗೆ ಜೇಷ್ಠತೆಯಲ್ಲಿ ಅವರಿಗಿಂತ ಕಿರಿಯ ಅಧಿಕಾರಿಯಾದ ಶ್ರೀ ಜಿ.ಟಿ. ರಂಗಪ್ಪ, ಪ್ರಸ್ತುತ ಕಾನೂನು ಅಧಿಕಾರಿ (ಕಿರಿಯ), ಇವರಿಗೆ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ : ಒಇ 111 ಪಿಪಿಇ 2010, ದಿನಾಂಕ : 30-03-2013ರಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ದಿನಾಂಕ : 24-01-2000ಕ್ಕೆ ಅರ್ಹತಾ ದಿನಾಂಕವಾಗಿ ನಿಗಧಿಪಡಿಸಿದ್ದು. ಅವರ ಹೆಸರಿನ ಮೇಲಿರುವ ಶ್ರೀ ಕಿರಣ್ ಎಸ್. ಪಾಟೀಲ್, ಪ್ರಸ್ತುತ ಕಾನೂನು ಅಧಿಕಾರಿ (ಕಿರಿಯ) ಇವರಿಗೆ ಸಹಾಯಕ ಸರ್ಕಾರಿ ಅಭಿಯೋಜಕರ ಜ್ಯೇಷ್ಠತಾ ಪಟ್ಟಿಯಲ್ಲಿ ಅರ್ಹತಾ ದಿನಾಂಕವನ್ನು ನಿಗಧಿಪಡಿಸಿರುವಂತೆ ಕರ್ನಾಟಕ ನಾಗರೀಕ ಸೇವೆ (ಪಿಪಿ) 1978ರ ಅಧಿನಿಯಮ 4(3)ರನ್ವಯ ದಿನಾಂಕ : 17-01-2000ಕ್ಕೆ ಅರ್ಹತಾ ದಿನಾಂಕವನ್ನು (Deemed date of eligibility) ಪರಿಗಣಿಸಿ, ವೇತನವನ್ನು ಕಾಲ್ಪನಿಕವಾಗಿ ನಿಗಧಿಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಬಿ).

**P.R. 205**

## ಸಹಕಾರ ಸಂಘಗಳ ನಿಬಂಧಕರ ಕಾರ್ಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ವಿಷಯ :** ಸ್ಥಗಿತಗೊಂಡಿರುವ ಮೊಳಕಾಲ್ಮೂರು ಟೌನ್ ಮಿಲ್ಲತ್ ಅಲ್ಪಸಂಖ್ಯಾತರ ಪತ್ತಿನ ಸಹಕಾರ ಸಂಘ ನಿ. ಮೊಳಕಾಲ್ಮೂರು ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಚಿತ್ರದುರ್ಗ ಇವರ ಪತ್ರದ ಸಂ. ಸನಿ : 30 : ಸಮಾಪನೆ/ 2012-13, ದಿನಾಂಕ : 24-09-2013.
2. ಈ ಕಛೇರಿಯ ಕಾರಣ ಕೇಳಿ ನೋಟೀಸು ದಿನಾಂಕ : 28-09-2013.
3. ಸಹಕಾರ ಅಭಿವೃದ್ಧಿ ಅಧಿಕಾರಿ, ಮೊಳಕಾಲ್ಮೂರು ತಾ. ಇವರ ದಿನಾಂಕ : 01-03-2014.

**ಪ್ರಸ್ತಾವನೆ :**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೊಳಕಾಲ್ಮೂರು ಟೌನ್ ಮಿಲ್ಲತ್ ಅಲ್ಪಸಂಖ್ಯಾತರ ಪತ್ತಿನ ಸಹಕಾರ ಸಂಘ ನಿ., ಮೊಳಕಾಲ್ಮೂರು ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ : ಸನಿ/30/ಆರ್‌ಜಿಎನ್/30464/2000-01, ದಿನಾಂಕ : 18-12-2000 ರಂದು ನೋಂದಣಿಯಾಗಿರುತ್ತದೆ. ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಮಂಡಳಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸದರಿ ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರಲ್ಲಿ ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿಯಾದ ಬಗ್ಗೆ ಉಲ್ಲೇಖ (3)ರಲ್ಲಿ ಸ್ವೀಕೃತಿ ಈ ಕಛೇರಿಗೆ ತಲುಪಿದೆ. ಆದಾಗ್ಯೂ ಅವರು ಯಾವುದೇ ಸಮಜಾಯಿಷಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಇದರಿಂದ ಸಂಘವು ಪುನಃಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ : ಡಿಆರ್‌ಡಿ : ಸಮಾಪನೆ/ಸಿಆರ್/14/2013-14, ದಿನಾಂಕ : 14-03-2014**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ. ಸಿಓ/201/ಸಿಎಲ್ಎಂ/2010, ಬೆಂಗಳೂರು ದಿನಾಂಕ : 17-02-2011 ಹಾಗೂ ಕ್ರಮಾಂಕ : ಸಿಓ/139/ಸಿಎಲ್ಎಂ/2010, ದಿನಾಂಕ : 04-07-2011ರ ಪ್ರಕಾರ ದತ್ತವಾದ ಅಧಿಕಾರದನ್ವಯ ಜಿ. ಓಬನಾಯಕ, ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಮೊಳಕಾಲ್ಮೂರು ಟೌನ್ ಮಿಲ್ಲತ್ ಅಲ್ಪಸಂಖ್ಯಾತರ ಪತ್ತಿನ ಸಹಕಾರ ಸಂಘ ನಿ. ಮೊಳಕಾಲ್ಮೂರು ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಅನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಮೊಳಕಾಲ್ಮೂರು ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು ಹಾಗೂ ನಿಬಂಧಕರ ಸುತ್ತೋಲೆಗೆ ಅನುಗುಣವಾಗಿ ಸಂಘದ ಆಸ್ತಿ–ಜವಾಬ್ದಾರಿ ವಿಲೇವಾರಿ ಮಾಡಿ ನೋಂದಣಿ ರದ್ಧತಿಗೆ ಪ್ರಸ್ತಾವೆ ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ : 14–03–2014 ರಂದು ಹೊರಡಿಸಿರುತ್ತೇನೆ.

P.R. 207

SC-100

ಸಹಕಾರ ಸಂಘಗಳ ಉಪ ನಿಬಂಧಕರು,

ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

## ಜಿಲ್ಲಾಧಿಕಾರಿಯವರ ಕಾರ್ಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

## ಅಧಿಸೂಚನೆ

### ನಂ. ಇಎಲ್ಎನ್ (ಪಂ)ಸಿಆರ್.06/13–14, ದಿನಾಂಕ : 13–03–2014.

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು 1993ರ 12ನೇ ನಿಯಮದ ಮೇರೆಗೆ ಹೊರಡಿಸಲಾದ ಈ ಕಛೇರಿಯ ಅಧಿಸೂಚನೆ ಸಂಖ್ಯೆ : ಇಎಲ್ಎನ್ (ಪಂ) ಸಿಆರ್.06/13–14, ದಿನಾಂಕ : 12–02–2014ರ ಪ್ರಕಾರ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಾಲ್ಲೂಕಿನ 01–ಇಟ್ಟಸಂದ್ರ, 24–ಕಲ್ಕುಂಟೆ ಅಗ್ರಹಾರ ಗ್ರಾಮ ಪಂಚಾಯತಿಗಳಿಗೆ, ನೆಲಮಂಗಲ ತಾಲ್ಲೂಕಿನ 15–ನರಸೀಪುರ ಗ್ರಾಮ ಪಂಚಾಯತಿಯ ಹಾಗೂ ದೊಡ್ಡಬಳ್ಳಾಪುರ ತಾಲ್ಲೂಕಿನ 11–ಹಾಡೋನಹಳ್ಳಿ, 15–ತಿಪ್ಪೂರು ಮತ್ತು 23–ಹೊಸಹಳ್ಳಿ ಗ್ರಾಮ ಪಂಚಾಯತಿಗಳಲ್ಲಿ ವಿವಿಧ ಕ್ಷೇತ್ರಗಳಿಂದ ಚುನಾಯಿತ ಸದಸ್ಯರನ್ನು ತುಂಬಲು ಉಪ ಚುನಾವಣೆಯನ್ನು ನಡೆಸಲಾಗಿದ್ದು, ಸದರಿ ಚುನಾವಣೆಯ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ಘೋಷಿಸಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 5ರ ಉಪ ಪ್ರಕರಣ 8ರಲ್ಲಿ ಮತ್ತು ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು 1993ರ ನಿಯಮ 76ರ ಪ್ರಕಾರ ಜಿಲ್ಲಾಧಿಕಾರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿ ಶ್ರೀ ವಿ. ಶಂಕರ್, ಭಾ.ಆ.ಸೇ. ಆದ ನಾನು ಸದರಿ ಗ್ರಾಮ ಪಂಚಾಯತಿಗೆ ಹೊಸದಾಗಿ ಆಯ್ಕೆಯಾದ ಸದಸ್ಯರುಗಳ ಹೆಸರುಗಳನ್ನು ಈ ಕೆಳಗೆ ನಮೂದಿಸಿರುವಂತೆ ಪ್ರಕಟಿಸಿರುತ್ತೇನೆ.

| ಕ್ರ. ಸಂ. | ತಾಲ್ಲೂಕಿನ ಹೆಸರು | ಗ್ರಾಮ ಪಂಚಾಯಿತಿ ಕ್ರಮ ಸಂಖ್ಯೆ ಮತ್ತು ಹೆಸರು | ಕ್ಷೇತ್ರದ ಕ್ರಮ ಸಂಖ್ಯೆ ಮತ್ತು ಹೆಸರು | ಕ್ಷೇತ್ರಕ್ಕೆ ನಿಗದಿ ಪಡಿಸಿದ ಸ್ಥಾನಗಳು | ಮೀಸಲಾತಿ ಸ್ಥಾನ | ಆಯ್ಕೆಯಾದ ಸದಸ್ಯರ ಹೆಸರು ಮತ್ತು ವಿಳಾಸ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಹೊಸಕೋಟೆ | 01–ಇಟ್ಟಸಂದ್ರ | 5–ಚೀಮಸಂದ್ರ | 1 | ಪ.ಪಂ (ಮ) | ನಾಗವೇಣಮ್ಮ ಕೋಂ ವೆಂಕಟೇಶಪ್ಪ ಸಿ.ಡಿ. ಚೀಮಸಂದ್ರ ಗ್ರಾಮ, ಬೆಂಡಿಗಾನಹಳ್ಳಿ ಅಂಚೆ, ಸೂಲಿಬೆಲೆ ಪೋಸ್ಟ್, ಹೊಸಕೋಟೆ ತಾಲ್ಲೂಕು |
| 2. | | 24–ಕಲ್ಕುಂಟೆ ಅಗ್ರಹಾರ | 1–ಕಲ್ಕುಂಟೆ ಅಗ್ರಹಾರ | 1 | ಹಿಂ.ವ.ಬಿ | ಎನ್. ಶಿವಪ್ಪ ಬಿನ್ ಲೇಟ್ ನಾರಾಯಣಪ್ಪ, ಕಲ್ಕುಂಟೆ ಅಗ್ರಹಾರ, ಹೊಸಕೋಟೆ ತಾಲ್ಲೂಕು |
| 3. | ದೊಡ್ಡಬಳ್ಳಾಪುರ | 11–ಹಾಡೋನಹಳ್ಳಿ | 5–ಲಕ್ಷ್ಮೀಪುರ | 1 | ಹಿಂ.ವ.ಎ (ಮ) | ಸುಜಾತ ಕೋಂ ಕೃಷ್ಣಪ್ಪ, ಹಾಡೋನಹಳ್ಳಿ, ತೂಬಗೆರೆ ಹೋಬಳಿ, ದೊಡ್ಡಬಳ್ಳಾಪುರ ತಾಲ್ಲೂಕು |
| 4. | | 15–ತಿಪ್ಪೂರು | 3–ಸುತ್ತಹಳ್ಳಿ | 1 | ಸಾಮಾನ್ಯ (ಮ) | ಕಲ್ಪನಾ ಕೋಂ ಮಹೇಂದ್ರ, ಜಾಲಿಗೆ ಗ್ರಾಮ, ತಿಪ್ಪೂರು, ದೊಡ್ಡಬಳ್ಳಾಪುರ ತಾಲ್ಲೂಕು |
| 5. | | 23–ಹೊಸಹಳ್ಳಿ | 4–ಗುಂಡಂಗೆರೆ–2 | 1 | ಸಾಮಾನ್ಯ | ಎನ್. ಲಕ್ಷ್ಮೀನಾರಾಯಣರೆಡ್ಡಿ ಬಿನ್ ನರಸಿಂಹಪ್ಪ, ಹೊಸಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೂಕು |

| ಕ್ರ. ಸಂ. | ತಾಲ್ಲೂಕಿನ ಹೆಸರು | ಗ್ರಾಮ ಪಂಚಾಯಿತಿ ಕ್ರಮ ಸಂಖ್ಯೆ ಮತ್ತು ಹೆಸರು | ಕ್ಷೇತ್ರದ ಕ್ರಮ ಸಂಖ್ಯೆ ಮತ್ತು ಹೆಸರು | ಕ್ಷೇತ್ರಕ್ಕೆ ನಿಗದಿ ಪಡಿಸಿದ ಸ್ಥಾನಗಳು | ಮೀಸಲಾತಿ ಸ್ಥಾನ | ಆಯ್ಕೆಯಾದ ಸದಸ್ಯರ ಹೆಸರು ಮತ್ತು ವಿಳಾಸ |
|---|---|---|---|---|---|---|
| 1 | 2 | 3 | 4 | 5 | 6 | 7 |
| 6. | ನೆಲಮಂಗಲ | 15–ನರಸೀಪುರ | 4–ಮಾಕೇನಹಳ್ಳಿ | 1 | ಹಿಂ.ವ.ಎ (ಮ) | ಮರಿಯಮ್ಮ ಕೋಂ ಲಕ್ಷ್ಮಯ್ಯ, ಲಕ್ಷ್ಮೀಪುರ, ಸೋಂಪುರ ಹೋಬಳಿ, ನೆಲಮಂಗಲ ತಾಲ್ಲೂಕು |

**ವಿ. ಶಂಕರ್**
ಜಿಲ್ಲಾಧಿಕಾರಿ,
ಬೆಂಗಳೂರು ಗ್ರಾಮಾಂತರ ಜಿಲ್ಲೆ.

P.R. 208
SC-100

**ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ (ನಿ. 441) ಕ.ರಾ.ಸ. ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು**

**ದಾವಾ ಸಂಖ್ಯೆ : ಆರ್‌ಸಿಎಸ್/ಸಿಆರ್‌ಡಿ/ಕೆಎಂಇ–08/459/2012–13**

**ದಾವಾ ಸಂಖ್ಯೆ: ಜೆಆರ್‌ಡಿ/ಎಎಕ್ಸ್‌ಬಿ/01/2013–14**

**ವಾದಿ :**

ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು,
ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿ.,
ಕೇಂದ್ರ ಕಛೇರಿ, ಚಾಮರಾಜಪೇಟೆ,
ಬೆಂಗಳೂರು–50

**ಪ್ರತಿವಾದಿ/ಗಳು:**

1. ಮೆ॥ ಕನ್ಸ್‌ಟ್ರಕ್ಷನ್ ಸಲ್ಯೂಷನ್ ಪ್ರೈ. ಲಿ.,
ನಂ. 164, 1ನೇ ಕ್ರಾಸ್, 1ನೇ ಹಂತ, ಎ.ಇ.ಸಿ.ಎಸ್. ಲೇಔಟ್,
ಸಂಜಯನಗರ, ಆರ್.ಎಂ.ವಿ. 2ನೇ ಹಂತ, ಬೆಂಗಳೂರು–94
2. ಕೆ. ರಾಜೇಶ್ ಕುಮಾರ್,
ನಂ. 301, 3ನೇ ಮಹಡಿ, ಅನ್ರಿಯ ರೆಸಿಡೆನ್ಸಿ, ಎಂ.ಎಸ್.ಆರ್. ಆಸ್ಪತ್ರೆ,
5ನೇ ಕ್ರಾಸ್, ಆಶ್ರಮ ಕಾಲೋನಿ, ಆರ್.ಎಂ.ವಿ. 2ನೇ ಹಂತ,
ಬೆಂಗಳೂರು–94
3. ಶ್ರೀಮತಿ ಶಾಲಿನಿ ಆರ್. ಕುಮಾರ್, ಕೋಂ ರಾಜೇಶ್ ಕುಮಾರ್ ಕೆ.,
ನಂ. 301, 3ನೇ ಮಹಡಿ, ಅನ್ರಿಯ ರೆಸಿಡೆನ್ಸಿ, ಎಂ.ಎಸ್.ಆರ್. ಆಸ್ಪತ್ರೆ,
5ನೇ ಕ್ರಾಸ್, ಆಶ್ರಮ ಕಾಲೋನಿ, ಆರ್.ಎಂ.ವಿ. 2ನೇ ಹಂತ,
ಬೆಂಗಳೂರು–94
4. ಶ್ರೀ ಸುರೇಶ್ ಟಿ. ಬಿನ್ ತಿಮ್ಮಯ್ಯ,
ನಂ. 50, 5ನೇ ಕ್ರಾಸ್, ಮಾರುತಿ ಲೇಔಟ್,
ವೆಸ್ಟ್ ಆಫ್ ಕಾರ್ಡ್ ರೋಡ್, ಬೆಂಗಳೂರು–79

**ಷರತ್ತಿಗೊಳಪಟ್ಟು ತೀರ್ಪು ಪೂರ್ವ ಜಪ್ತಿ ಆದೇಶದ ನೋಟೀಸ್**

ವಾದಿಯು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರಡಿ ಪ್ರತಿವಾದಿಗಳ ವಿರುದ್ಧ ದಾವೆಯನ್ನು ದಾಖಲಿಸಿ, ದಿನಾಂಕ: 31–03–2012ಕ್ಕೆ ಇದ್ದಂತೆ ಪ್ರತಿವಾದಿಗಳಿಂದ ರೂ. 9,18,67,602/–ಗಳನ್ನು ಬಡ್ಡಿಯೊಂದಿಗೆ ವಸೂಲಿ ಮಾಡಲು ಕೋರಿ ಡಿಕ್ರಿ ಆದೇಶ ನೀಡಲು ಅರ್ಜಿಯನ್ನು ಸಲ್ಲಿಸಿರುತ್ತಾರೆ.

ದಾವೆಯನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ನಿಬಂಧಕರ ಕಛೇರಿ, ಇವರ ನ್ಯಾಯಾಲಯದಲ್ಲಿ ದಾಖಲಿಸಿದ್ದು, ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಓ 22/ಸಿಎಲ್‌ಎಂ/2013, ದಿನಾಂಕ: 02–08–13ರ ಪ್ರತ್ಯಾಯೋಜನೆಯಂತೆ ಈ ನ್ಯಾಯಾಲಯಕ್ಕೆ ವರ್ಗಾವಣೆಗೊಂಡಿರುತ್ತದೆ. ಈ ನ್ಯಾಯಾಲಯದಲ್ಲಿ ಪ್ರಕರಣದ ವಿಚಾರಣೆ ಪ್ರಗತಿಯಲ್ಲಿರುತ್ತದೆ.

ವಾದಿಯು ದಿನಾಂಕ: 19–12–2013ರಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರಡಿ ಒಂದು ಮಧ್ಯಂತರ ಅರ್ಜಿ ಸಲ್ಲಿಸಿ, ಪ್ರತಿವಾದಿ–2 ಮತ್ತು 3 ರವರಿಗೆ ಸೇರಿದ ಷೆಡ್ಯೂಲ್‌ನಲ್ಲಿನ ಆಸ್ತಿಯನ್ನು ಅರ್ಜಿಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಆದೇಶ ಪೂರ್ವ ಜಪ್ತಿ ಮಾಡಲು ಕೋರಿರುತ್ತಾರೆ.

ವಾದಿ ಪರ ಶ್ರೀ ಹನುಮಂತರಾಜು ಮತ್ತು ಪ್ರತಿವಾದಿಗಳ ಪರ ಶ್ರೀ ಬಿ.ಎಸ್. ಮಂಜುನಾಥ್ ವಕೀಲರು ನ್ಯಾಯಾಲಯದಲ್ಲಿ ಪ್ರತಿನಿಧಿಸಿರುತ್ತಾರೆ. ಪ್ರತಿವಾದಿ ವಕೀಲರು ವಾದಿಯ ಮಧ್ಯಂತರ ಅರ್ಜಿಗೆ ಆಕ್ಷೇಪಣೆ ಸಲ್ಲಿಸಿ, ಪ್ರತಿವಾದಿ–1 ಕಂಪನಿ ಮಾತ್ರ ವಾದಿ–ಬ್ಯಾಂಕಿನ ಸಹ ಸದಸ್ಯರೆಂದು, ಪ್ರತಿವಾದಿ–2 ರಿಂದ 4 ರವರು ವ್ಯಕ್ತಿಗತ ಗ್ಯಾರಂಟಿಯನ್ನು ಪ್ರತಿವಾದಿ–1 ಕಂಪನಿ ಪರ ನೀಡಿದ್ದು, ಇವರು ವಾದಿ–ಬ್ಯಾಂಕಿನ ಸದಸ್ಯರಲ್ಲದಿರುವುದರಿಂದ ಇವರ ವಿರುದ್ಧ ಈ ನ್ಯಾಯಾಲಯದಲ್ಲಿ ದಾವಾ ಊರ್ಜಿತವಲ್ಲವೆಂದು ಆದುದರಿಂದ ಇವರಿಗೆ ಸೇರಿದ ಆಸ್ತಿಯನ್ನು ಜಪ್ತಿ ಮಾಡಲು ಬರುವುದಿಲ್ಲವೆಂದು ತಿಳಿಸಿ, ತಮ್ಮ ಪರ ಕರ್ನಾಟಕ ಉಚ್ಛ ನ್ಯಾಯಾಲಯದ ವಿಭಾಗೀಯ ಪೀಠದ ಆದೇಶ "The Mysore State Wollen Handloom Weavers Co-operative Society Ltd., v/s Vittappa Krishnappa Malagi and Another. ``ILR 1973, KAR 684" ಅನ್ನು ಉಲ್ಲೇಖಿಸಿ ಈ ಹಿನ್ನೆಲೆಯಲ್ಲಿ ಮಧ್ಯಂತರ ಅರ್ಜಿಯನ್ನು ವಜಾಗೊಳಿಸಲು ಕೋರಿರುತ್ತಾರೆ.

ವಾದಿ ವಕೀಲರು ವಾದ ಮಂಡಿಸಿ ಮಧ್ಯಂತರ ಅರ್ಜಿಯಲ್ಲಿನ ಅಂಶಗಳನ್ನು ಪುನರುಚ್ಚರಿಸಿ, ಪ್ರತಿವಾದಿಗಳು ಪಡೆದ ಸಾಲ ಸುಸ್ತಿಯಾಗಿದ್ದರೂ ಮರುಪಾವತಿಗೆ ಕ್ರಮವಿಡದೇ, ತಮಗೆ ಆಸ್ತಿ ಮಾರಾಟ ಮಾಡಿದ ಮಾಲೀಕರ ಮೂಲಕ ಲೀಗಲ್ ನೋಟೀಸು ಕೊಡಿಸಿ, ಸಾಲ ಮರು ಪಾವತಿಯನ್ನು ವಿಳಂಬ ಮಾಡಲು ಯತ್ನಿಸಿರುವುದಾಗಿ, ಪ್ರತಿವಾದಿಗಳು ನ್ಯಾಯಾಲಯದ ಕಲಾಪಗಳಲ್ಲಿ ಭಾಗವಹಿಸಿ, ಸಾಲ ಮರು ಪಾವತಿಸುವುದಾಗಿ ಅನೇಕ ಬಾರಿ ತಿಳಿಸಿ ಕಾಲಾವಕಾಶ ಪಡೆದಿದ್ದರೂ, ಒಂದು ಕಂತನ್ನು ಕೂಡ ಮರು ಪಾವತಿಸಿಲ್ಲವೆಂದು, ಸಾಲಕ್ಕಾಗಿ ಬ್ಯಾಂಕಿಗೆ ಆಧಾರ ಮಾಡಿರುವ ಆಸ್ತಿ ಮತ್ತು ದಿನಾಂಕ: 15–09–2012ರ ಆದೇಶದಲ್ಲಿ ಜಪ್ತಿ ಮಾಡಿರುವ ಐಟಂ ನಂ. 1 ರಿಂದ 3 ರಲ್ಲಿನ ಆಸ್ತಿಗಳೂ ಕೂಡ ಸಿವಿಲ್ ಮಿಸಲೇನಿಯಸ್ ಅರ್ಜಿ ಸಂಖ್ಯೆ: ಸಿಎಂಪಿ 6/2012ರನ್ವಯ ವ್ಯಾಜ್ಯ ವಿಚಾರಣೆಗೆ ಒಳಪಟ್ಟಿರುವುದಾಗಿ, ಇದರಿಂದ ಪ್ರತಿವಾದಿಗಳಿಂದ ಬರಬೇಕಾದ ಸುಮಾರು ರೂ. 10.00 ಕೋಟಿ ಬಾಕಿ ಮೊಬಲಗಿಗೆ ಅಗತ್ಯವಿರುವ ಆಸ್ತಿ ಭದ್ರತೆ ಇಲ್ಲದೇ ಕೊರತೆ ಬೀಳಬಹುದೆಂದು ಅರ್ಜಿಯಲ್ಲಿ ಕೋರಿರುವ ಆಸ್ತಿಯನ್ನು ಜಪ್ತಿಗೆ ಒಳಪಡಿಸಲು ಕೋರಿರುತ್ತಾರೆ.

ಮುಂದುವರೆದು, ಪ್ರತಿವಾದಿ–1 ಕಂಪನಿಯು ಕಲಂ 18(1)(ಸಿ)ರನ್ವಯ ವಾದಿ–ಬ್ಯಾಂಕಿನಲ್ಲಿ "ಎಫ್" ಕೆಟಗರಿಯಲ್ಲಿ ಸಹ ಸದಸ್ಯತ್ವ ಪಡೆದಿದ್ದು, ಪ್ರತಿವಾದಿ–2 ರಿಂದ 4 ರವರು ಪ್ರತಿವಾದಿ–1 ಪಡೆದ ಸಾಲಕ್ಕೆ ``Irrevocable and personal guarantee"ಯನ್ನು ದಿನಾಂಕ: 08–12–2010 ಮತ್ತು 09–12–2010ರಂದು ನೀಡಿರುವುದಾಗಿ, ಪ್ರತಿವಾದಿ–1 ಸಹಸದಸ್ಯತ್ವ ಪಡೆದಿರುವುದರಿಂದ ಪುನಃ ಪ್ರತಿವಾದಿ–2 ರಿಂದ 4ರವರು ಬ್ಯಾಂಕಿನಲ್ಲಿ ವೈಯಕ್ತಿಕವಾಗಿ ಸದಸ್ಯರಾಗಬೇಕಾಗಿಲ್ಲವೆಂದು ಆದರೆ, ಸದಸ್ಯ ಕಂಪನಿಯ ನಿರ್ದೇಶಕರು ಇದರ ಸಾಲ ಅಥವಾ ಜವಾಬ್ದಾರಿ ತೀರುವಳಿ ಮಾಡಲು ಬಾಧ್ಯರಾಗಿರುತ್ತಾರೆಂದು, ಪ್ರತಿವಾದಿ–2 ಮತ್ತು 3ರವರ ಆಸ್ತಿಯನ್ನು ಜಪ್ತಿಗೆ ಒಳಪಡಿಸದಿದ್ದಲ್ಲಿ, ಮುಂದೆ ತಮ್ಮ ಪರ ದಾವೆ ಇತ್ಯರ್ಥವಾದರೂ, ಡಿಕ್ರಿ ಜಾರಿಗೊಳಿಸಲು ಆಸ್ತಿ ಭದ್ರತೆಯ ಕೊರತೆಯಿಂದ ನಿರರ್ಥಕವಾಗುತ್ತದೆಂದು, ಪ್ರತಿವಾದಿ–2ರಿಂದ 4 ರವರು ಪ್ರತಿವಾದಿ–1 ವಾದಿ–ಬ್ಯಾಂಕಿನಿಂದ ಪಡೆದ ಸಾಲದ ವ್ಯವಹಾರಕ್ಕೆ ಪ್ರತಿವಾದಿ–1ರ ಪ್ರತಿನಿಧಿಗಳಾಗಿ ಒಪ್ಪಿಗೆ/ಖಾತರಿ ನೀಡಿದ ಇವರೆಲ್ಲರೂ ಸಹಕಾರ ಸಂಘಗಳ ಕಾಯ್ದೆ ಕಲಂ 117(3)(ಎ)ರನ್ವಯ ಪ್ರತಿವಾದಿ–1 ಆಸ್ತಿ/ವ್ಯವಹಾರದ ಮೇಲೆ ಆಸಕ್ತಿ ಹೊಂದಿದಂತಾಗುತ್ತಾದ್ದರಿಂದ ಅಂತಹ ವ್ಯಕ್ತಿಗಳು ಅಗತ್ಯ ಪಕ್ಷಗಾರರಾಗುತ್ತಾರೆಂದು ಪ್ರತಿವಾದಿ–ವಕೀಲರು ಉಲ್ಲೇಖಿಸಿರುವ ಮಾನ್ಯ ನ್ಯಾಯಾಲಯದ ಆದೇಶ ``ILR 1973 KAR 684"ರಲ್ಲಿ ಒಂದು ಸಹಕಾರ ಸಂಘ ಮತ್ತು ಸಂಘದ ಸದಸ್ಯರಲ್ಲದ (Non-member) ಜಾಮೀನುದಾರರಾಗಿರುವ ಒಬ್ಬ ವ್ಯಕ್ತಿಗೆ ಸಂಬಂಧಿಸಿದ್ದು, ಪ್ರಸಕ್ತ ಪ್ರಕರಣಕ್ಕೆ ಇದು ಅನ್ವಯಿಸುವುದಿಲ್ಲವೆಂದು ತಿಳಿಸಿ, ಪ್ರತಿವಾದಿಗಳ ಆಕ್ಷೇಪಣೆಯನ್ನು ತಿರಸ್ಕರಿಸಿ, ಪ್ರಸ್ತಾವಿತ ಆಸ್ತಿಯನ್ನು ಜಪ್ತಿಗೆ ಒಳಪಡಿಸಲು ಕೋರಿರುತ್ತಾರೆ.

ಪ್ರತಿವಾದಿ ವಕೀಲರು ತಮ್ಮ ವಾದದಲ್ಲಿ ಮಧ್ಯಂತರ ಅರ್ಜಿಗೆ ಸಲ್ಲಿಸಿದ ಆಕ್ಷೇಪಣೆಗಳನ್ನೇ ಪುನರುಚ್ಚರಿಸಿ ಪ್ರತಿವಾದಿ–1 ಕಂಪನಿ ಮಾತ್ರ ವಾದಿ–ಬ್ಯಾಂಕಿನ ಸಹ ಸದಸ್ಯರೆಂದು ಪ್ರತಿವಾದಿ–2 ರಿಂದ 4 ರವರು ಪ್ರತಿವಾದಿ–1 ಕಂಪನಿಯನ್ನು ಪ್ರತಿನಿಧಿಸುತ್ತಾರಾದರೂ, ವ್ಯಕ್ತಿಗತ ಗ್ಯಾರಂಟಿಯನ್ನು ಮಾತ್ರ ಪ್ರತಿವಾದಿ–1 ಕಂಪನಿಗೆ ನೀಡಿದ್ದು, ಇವರು ವಾದಿ–ಬ್ಯಾಂಕಿನ ಸದಸ್ಯರಲ್ಲದಿರುವುದರಿಂದ ಇದು ಕಲಂ 70ರ ವ್ಯಾಪ್ತಿಗೆ ಒಳಪಡದಿರುವುದರಿಂದ ಪ್ರತಿವಾದಿ–2 ರಿಂದ 4 ರವರ ವಿರುದ್ಧ ದಾವಾ ಈ ನ್ಯಾಯಾಲಯದಲ್ಲಿ ಊರ್ಜಿತವಲ್ಲವೆಂದು, ವಾದಿ–ವಕೀಲರು ಉಲ್ಲೇಖಿಸಿರುವ ಕಾಯ್ದೆ ಕಲಂ 117(3)(ಎ) ಈ ಪ್ರಕರಣಕ್ಕೆ ಅನ್ವಯಿಸುವುದಿಲ್ಲವೆಂದು ತಿಳಿಸಿ, ಈ ವ್ಯಾಜ್ಯಕ್ಕೆ ಸಿವಿಲ್ ನ್ಯಾಯಾಲಯವೇ ಸೂಕ್ತ ಪ್ರಾಧಿಕಾರವಾಗುತ್ತದೆಂದು ಕಂಪನಿ ಕಾಯ್ದೆ ಕಲಂ 34ರನ್ವಯ ಕಂಪನಿ ಸಮಾಪನೆ ಹಂತಕ್ಕೆ ಬಂದಲ್ಲಿ ಮಾತ್ರ ವೈಯಕ್ತಿಕ ನಿರ್ದೇಶಕರ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಬಹುದೆಂದು ತಿಳಿಸಿ ಮಧ್ಯಂತರ ಅರ್ಜಿ ವಜಾಗೊಳಿಸಲು ಕೋರಿರುತ್ತಾರೆ.

ವಾದಿಯ ಮೂಲ ದಾವಾ ಅರ್ಜಿ ಮಧ್ಯಂತರ ಅರ್ಜಿಯಲ್ಲಿನ ಅಂಶಗಳು ಪ್ರತಿವಾದಿಗಳ ಆಕ್ಷೇಪಣೆಯನ್ನು ಪರಿಶೀಲಿಸಲಾಯಿತು. ವಾದಿ ಮತ್ತು ಪ್ರತಿವಾದಿಗಳ ಪರ ವಕೀಲರ ವಾದವನ್ನು ಆಲಿಸಲಾಯಿತು.

ಪ್ರತಿವಾದಿ–1 ಸಂಸ್ಥೆಯು ಕಂಪನಿ ಕಾಯ್ದೆಯಡಿ ನೋಂದಣಿಯಾಗಿರುವ ಒಂದು ನಿಕಾಯ ಸಂಸ್ಥೆ "body corporate" ಆಗಿದ್ದು, ಪ್ರತಿವಾದಿ–2ರಿಂದ 4 ರವರೆಗಿನವರು ಕಂಪನಿಯ ಪಾಲುದಾರ ನಿರ್ದೇಶಕರಾಗಿರುವುದು, ಪ್ರತಿವಾದಿ–2 ಇದರ ವ್ಯವಸ್ಥಾಪಕ ಪಾಲುದಾರರಾಗಿರುವುದು, ಪ್ರತಿವಾದಿ–1 ವಾದಿ ಬ್ಯಾಂಕಿನಲ್ಲಿ ಸಹಸದಸ್ಯತ್ವ ಪಡೆದು ನಂತರ ಸಾಲ ಪಡೆದಿರುವುದು, ಪ್ರತಿವಾದಿ–2 ರಿಂದ 4 ರವರು ಹಿಂಪಡೆಯಲಾಗದ ಮತ್ತು ವೈಯಕ್ತಿಕ ಖಾತರಿ (Irrevocable and personal guarantee) ನೀಡಿರುವುದು ಈ ಅಂಶಗಳು ಪ್ರತಿವಾದಿಗಳೂ ಒಪ್ಪಿರುವ ನಿರ್ವಿವಾದ ಅಂಶಗಳಾಗಿರುತ್ತವೆ. ಪ್ರತಿವಾದಿಗಳ ತಕರಾರೇನಿದ್ದರೂ, ಪ್ರತಿವಾದಿ–2 ರಿಂದ 4 ರವರು ವೈಯಕ್ತಿಕವಾಗಿ ವಾದಿ–ಬ್ಯಾಂಕಿನ ಸದಸ್ಯರಾಗಿಲ್ಲವೆಂದು, ಇದರಿಂದಾಗಿ ಅವರ ವಿರುದ್ಧ ಈ ನ್ಯಾಯಾಲಯದಲ್ಲಿ ದಾವೆ ಊರ್ಜಿತವಲ್ಲವೆಂಬುದಾಗಿರುತ್ತದೆ.

ಈ ಬಗ್ಗೆ ಕಾಯ್ದೆಯಲ್ಲಿರುವ ವಿವಿಧ ಅವಕಾಶಗಳ ಬಗ್ಗೆ ಪರಿಶೀಲಿಸೋಣ. ಸಹಕಾರ ಸಂಘಗಳ ಕಾಯ್ದೆ ಕಲಂ 18 ಕಲಂ 70 ಮತ್ತು ಕಲಂ 117.

**Section 18 :** Nominal Or Associate Members : [(1) Notwithstanding anything contained in Section 16, a co-operative society may admit, -

(a) any individual as a nominal or associate member;

(b) any banking company as a nominal member;

Explanation: - In this section, ``banking company'' shall have the same meaning as is assigned to it in the Deposit Insurance Corporation Act, 1961 (Central Act 47 of 1961).

**[(c) any firm, company, co-operative society or any body or corporation constituted by or under any law for the time being in force, as a nominal or associate member]**

ಅಂದರೆ, ಒಂದು ಸಹಕಾರ ಸಂಘದಲ್ಲಿ ಕಂಪನಿಯನ್ನು ನಾಮಮಾತ್ರ ಅಥವಾ ಸಹ ಸದಸ್ಯ ಮಾಡಿಕೊಳ್ಳಲು ಅವಕಾಶವಿದ್ದು, ಅದರಂತೆ ಪ್ರತಿವಾದಿ–1 ಕಲಂ 18(1)(ಸಿ) ರಡಿ "ಎಫ್" ಕೆಟಗರಿಯಲ್ಲಿ ವಾದಿ–ಬ್ಯಾಂಕಿನ ಸದಸ್ಯತ್ವ ಪಡೆದಿರುತ್ತದೆ.

ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರ ಅವಕಾಶ ಕೆಳಕಂಡಂತಿರುತ್ತದೆ.

**"Section 70" :** Disputes which may be referred to Registrar for decision: -

(1) Notwithstanding anything contained in any law for the time being in force, if any dispute touching the constitution, management or the business of a co-operative society [other than a dispute pertaining to the election of the board and election of the office bearers] arises-

(a) among members, past members and persons claiming through members, past members and deceased members, or

(b) xxxxx

(c) xxxxx

(d) xxxxx

such dispute shall be referred to the Registrar for decision and [no Civil or Labour or Revenue Court of Industrial Tribunal] shall have jurisdiction to entertain any suit or other proceeding in respect of such dispute.

(2) For the purposes of sub-section (1), the following shall be deemed to be disputes touching the constitution, management or the business of a co-operative society, namely,-

(a) a claim by the society for a debt or demand due to it from member or the nominee, heirs or legal representatives of a deceased member, whether such debt or demand be admitted or not;

(b) xxxx

(c) xxxx

(d) xxxx

(e) xxxx

(3) If any question arises whether a dispute referred to the Registrar under this section is dispute touching the constitution, management or the business of a co-operative society, the decision thereon of the Registrar shall be final and shall not be called to question in any Court.

ಮೇಲಿನ ವಿವರಣೆಯಂತೆ ಸಹಕಾರ ಸಂಘಗಳ ಕಾಯ್ದೆಯಡಿ ಒಂದು ವ್ಯಾಜ್ಯವು ಊರ್ಜಿತವಾಗಬೇಕಾದಲ್ಲಿ ಸಹಕಾರ ಸಂಘದ ಸದಸ್ಯತ್ವ ಸಂಬಂಧವನ್ನು ಪಡೆದು ವ್ಯವಹಾರಿಕ ಸಂಬಂಧವನ್ನು ಹೊಂದಬೇಕಾಗುತ್ತದೆ. ವಾದಿ ಬ್ಯಾಂಕು ಸಹಕಾರ ಸಂಘಗಳ ಕಾಯ್ದೆಯಡಿ ನೋಂದಣಿಯಾಗಿರುವ ಒಂದು ಸಂಸ್ಥೆಯಾಗಿದ್ದು, ಪ್ರತಿವಾದಿ–1 ಒಂದು ನಿಕಾಯ (body corporate) ಕಂಪನಿಯಾಗಿದ್ದು, ನಿಯಮಾನುಸಾರ ಸಹಕಾರ ಸಂಘದ (ವಾದಿ–ಬ್ಯಾಂಕಿನ) ಸದಸ್ಯತ್ವ ಪಡೆದ ನಂತರ, ಸಹಕಾರ ಸಂಘದಿಂದ ಪ್ರತಿಫಲ (ಸಾಲ) ಪಡೆಯಲು ಕಂಪನಿಯನ್ನು ಪ್ರತಿನಿಧಿಸುವ ಪಾಲುದಾರರು ವಾದಿ–ಬ್ಯಾಂಕಿನ ಸಾಲದ ದಸ್ತಾವೇಜುಗಳಿಗೆ ಸಹಿ ಮಾಡಿ ವ್ಯವಹಾರವನ್ನು ಒಪ್ಪಿರುವುದಲ್ಲದೇ ಹಿಂತೆಗೆಯಲಾಗದ ವೈಯಕ್ತಿಕ ಖಾತರಿಯನ್ನು ಬ್ಯಾಂಕಿಗೆ ನೀಡಿರುತ್ತಾರೆ. ನಿಕಾಯ ಸಂಸ್ಥೆಯಲ್ಲಿ ಪಾಲುದಾರರೇ ಪ್ರತಿನಿಧಿಗಳಾಗಿರುತ್ತಾರೆ. ಪಾಲುದಾರರಿಲ್ಲದೇ ನಿಕಾಯ ಸಂಸ್ಥೆಗೆ ಅಸ್ಥಿತ್ವವಿರುವುದಿಲ್ಲ. ಆದುದರಿಂದ, ನಿಕಾಯ ಕಂಪನಿ ವಾದಿ–ಬ್ಯಾಂಕಿನಲ್ಲಿ ಸದಸ್ಯತ್ವ ಪಡೆದಿದೆ ಎಂದರೆ ಅದರ ಅರ್ಥ ಪಾಲುದಾರರೆಲ್ಲರೂ ಸದಸ್ಯತ್ವ ಪಡೆದಂತಾಗುತ್ತದೆ. ಈ ಹಿನ್ನೆಲೆಯಲ್ಲಿ ಕಂಪನಿಯು ವಾದಿ–ಬ್ಯಾಂಕಿನ ಸದಸ್ಯರಾದ ನಂತರ ಅದನ್ನು ಪ್ರತಿನಿಧಿಸುವ ಪ್ರತಿಯೊಬ್ಬರೂ ಪ್ರತ್ಯೇಕವಾಗಿ ವೈಯಕ್ತಿಕವಾಗಿ ಸದಸ್ಯತ್ವ ಪಡೆಯುವ ಅಗತ್ಯತೆ ಕಂಡು ಬರುವುದಿಲ್ಲ. ಆದರೆ, ಸದಸ್ಯ ಕಂಪನಿಯ ಪಾಲುದಾರರಾಗಿ ಕಂಪನಿಯ ಲಾಭ, ನಷ್ಟ, ಸಾಲ ಅಥವಾ ವ್ಯವಹಾರಿಕ ಜವಾಬ್ದಾರಿಯ ಹೊಣೆಗಾರಿಕೆಯು ಎಲ್ಲಾ ಪಾಲುದಾರ ಸದಸ್ಯರದ್ದಾಗಿರುತ್ತದೆ.

ತರ್ಕಕ್ಕಾಗಿ ಕಲಂ 70ರಡಿ ವ್ಯಾಜ್ಯದೊಳಗೆ ಬರಲು ಪ್ರತಿಯೊಬ್ಬ ವ್ಯಕ್ತಿಯೂ, ವ್ಯಕ್ತಿಗತವಾಗಿ ಸದಸ್ಯರಾಗಬೇಕೆಂದು, ಸದ್ಯಕ್ಕೆ ಅಂದುಕೊಳ್ಳೋಣ. ಕಲಂ 70(1)(ಎ)ರಲ್ಲಿನ ಅವಕಾಶವನ್ನು ಕೂಲಂಕಷವಾಗಿ ಅವಲೋಕಿಸಿದಲ್ಲಿ, ಇಲ್ಲಿ ಸ್ಪಷ್ಟವಾಗಿ ಸದಸ್ಯರ ಮೂಲಕ ವ್ಯವಹರಿಸುವ ವ್ಯಕ್ತಿಗಳೂ ಸಹ ಕಲಂ 70ರಡಿ (if any dispute touching the constitution, management or the business of a co-operative society arises-

(ಎ) among members, past members and persons claiming through members, past members and deceased members, or) ದಾವಾ ವ್ಯಾಪ್ತಿಗೆ ಒಳಪಡುತ್ತಾರೆಂದು ತಿಳಿಯಪಡಿಸಲಾಗಿದೆ. ಅಂದರೆ, ಯಾವುದೇ ವ್ಯಕ್ತಿಗಳು ಸದಸ್ಯರ ಮೂಲಕ ವ್ಯವಹಾರದ ಸಂಬಂಧವನ್ನು ಹೊಂದಿದ್ದರೂ, ಅಂತಹ ವ್ಯಕ್ತಿಗಳು ಸಹ ದಾವೆಯ ವ್ಯಾಪ್ತಿಯಲ್ಲಿ ಒಳಪಟ್ಟವರೆಂದು ಪರಿಗಣಿಸಲ್ಪಡುತ್ತಾರೆ. ಪ್ರಸ್ತುತ ಪ್ರಕರಣದಲ್ಲಿ ಪ್ರತಿವಾದಿ–1, ವಾದಿ–ಬ್ಯಾಂಕಿನ ಸದಸ್ಯತ್ವ ಪಡೆದಿದ್ದು, ಪ್ರತಿವಾದಿ–2 ರಿಂದ 4 ರವರು ಪ್ರತಿವಾದಿ–1ರ ಮೂಲಕ ಸಾಲದ ವ್ಯವಹಾರಕ್ಕೆ ಭಾಗಿಯಾಗಿದ್ದು, ಪ್ರತಿವಾದಿ–2 ರಿಂದ 4ರವರು ಒಂದು ವೇಳೆ ವ್ಯಕ್ತಿಗಳಾಗಿ ವ್ಯವಹರಿಸಿದ್ದರೂ ಕೂಡ ಪ್ರತಿವಾದಿ–1ರ ಮೂಲಕ ವ್ಯವಹರಿಸಿರುವುದರಿಂದ, ಈ ಹಿನ್ನೆಲೆಯಲ್ಲೂ ಕೂಡ ಪ್ರತಿವಾದಿ–2 ರಿಂದ 4ರವರು ಈ ದಾವೆಯಲ್ಲಿ ಅಗತ್ಯ ಪಕ್ಷಗಾರರಾಗಿದ್ದು, ದಾವೆಯು ಇವರ ವಿರುದ್ಧ ಊರ್ಜಿತವಾಗಿರುತ್ತದೆ. ಆದುದರಿಂದ ಪ್ರತಿವಾದಿ–ವಕೀಲರು ಪ್ರತಿವಾದಿ–2 ರಿಂದ 4 ಸದಸ್ಯರಲ್ಲದಿರುವುದರಿಂದ, ಇವರ ವಿರುದ್ಧ ಈ ನ್ಯಾಯಾಲಯದಲ್ಲಿ ವ್ಯಾಜ್ಯ ಊರ್ಜಿತವಲ್ಲವೆಂಬ ವಾದವನ್ನು ಒಪ್ಪಲು ಬರುವುದಿಲ್ಲ. ಸಹಕಾರ ಸಂಘಗಳ ಕಾಯ್ದೆ ಕಲಂ 117(3)ರ ಅವಕಾಶವನ್ನು ಪರಿಶೀಲಿಸೋಣ.

**117(3)(a) :** If the Registrar or any other person to whom dispute is referred is satisfied that a person, whether he be a member of the Co-operative party to a dispute, he may order that the person whom has acquired the interest in the property may join as a party to the dispute; and any decision that may be passed on the reference by the Registrar or his nominee or any other person shall be binding on the party so joined, in the same manner as if he were an original party to the dispute".

ಅಂದರೆ ಯಾವುದೇ ಒಬ್ಬ ವ್ಯಕ್ತಿ ಸಹಕಾರ ಸಂಘದಲ್ಲಿ ಸದಸ್ಯರಿರಲಿ ಅಥವಾ ಇಲ್ಲದಿರಲಿ, ದಾವೆಯಲ್ಲಿ ಒಳಗೊಂಡಿರುವ ವ್ಯಕ್ತಿಯ ಆಸ್ತಿಯಲ್ಲಿ ಆಸಕ್ತಿ ಹೊಂದಿದ್ದಲ್ಲಿ, ಅಂತಹ ವ್ಯಕ್ತಿಯನ್ನು ದಾವೆಯಲ್ಲಿ ಅಗತ್ಯ ಪಕ್ಷಗಾರರನ್ನಾಗಿ ಸೇರಿಸಲು ತೀರ್ಮಾನಿಸುವ ಅಧಿಕಾರವು ನಿಬಂಧಕರಿಗೆ ಇರುತ್ತದೆ.

ಅಲ್ಲದೇ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಉಲ್ಲೇಖಿತ ಆದೇಶ "KLI 1986 Page 291"

Chigateri Brothers v/s Karnataka Industrial Co-operative Bank Ltd., and others ರ ಪ್ರಕರಣದಲ್ಲಿ KARNATAKA CO-OP SOCIETIES ACT - Sec.117(a)- Impleading of parties-Guarantors to a loan whether could be impleaded, ಎನ್ನುವ ಬಗ್ಗೆ ವಿಶ್ಲೇಷಿಸಿದ್ದು, ಈ ಕೆಳಕಂಡಂತೆ ತೀರ್ಮಾನಿಸಲಾಗಿದೆ.

**HELD:**

"The records Indicates that parties are none other than brothers or other close relatives of the principal debtors and all of them are parties of the firm, of which a principal debtor is also a partner. The firm become guarantor for the repayment of loan at some point of time after the loan was advanced. Hence, the firm has acquired some kind of interest in the properties of the principal debtor and the partner of the firm is apparent. If that is also, then clearly if the dispute resolution involves adjudication of the liabilities of the principal debtor, it becomes necessary to adjudicate the extent of the liability of the guarantors whether they be members of the society or not and the action of one partner of the firm binds the other members of the firm and if one or more of them came forward to stand guarantee for repayment of the loan, then the firm shall necessary become a party."

ಉಲ್ಲೇಖಿಸಿರುವ ಈ ಪ್ರಕರಣದಲ್ಲಿ ಪ್ರತಿವಾದಿ-1 ಜಯವೈಭವ-ಚಿಗಟೇರಿ ಎಂಬುವವರು ವಾದಿ-ಬ್ಯಾಂಕಿನಲ್ಲಿ ಸಾಲ ಪಡೆದಿದ್ದು, ಈ ಸಾಲಕ್ಕೆ ಜಯವೈಭವ ಎಂಬ ಪಾಲುದಾರ ಕಂಪನಿ ಜಾಮೀನುದಾರರಾಗಿದ್ದು, ಈ ಕಂಪನಿಯ ಪಾಲುದಾರರು [ಪ್ರತಿವಾದಿ-3(ಎ) ಯಿಂದ ಪ್ರತಿವಾದಿ-3(ಎಫ್)] ಪ್ರತಿವಾದಿ-1ರವರ ಹತ್ತಿರದ ಬಂಧುಗಳಾಗಿರುತ್ತಾರೆ. ಕಂಪನಿ ಜಾಮೀನುದಾರರಾದ ನಂತರ ಇವರು ಪ್ರತಿವಾದಿ-1ರ ಆಸ್ತಿಯ ಮೇಲೆ ಆಸಕ್ತಿ ಹೊಂದಿದಂತಾಗುತ್ತದೆಂದು, ಆದುದರಿಂದ ಕಲಂ 117(3)(ಎ)ರನ್ವಯ ಪ್ರತಿವಾದಿ-1 ಸಾಲ ತೀರುವಳಿ ಮಾಡಲು ಕಂಪನಿಯ ಪಾಲುದಾರರು ಸಹಕಾರ ಸಂಘದಲ್ಲಿ ಸದಸ್ಯರಿರಲಿ ಅಥವಾ ಇಲ್ಲದಿರಲಿ ಜವಾಬ್ದಾರರೆಂದು ಸ್ಪಷ್ಟವಾಗಿ ತಿಳಿಯಪಡಿಸಲಾಗಿದೆ. ಪ್ರಸ್ತುತ ಪ್ರಕರಣವು ಸಹ ಇದೇ ರೀತಿ ಸಾಮ್ಯತೆಯನ್ನು ಹೊಂದಿದ್ದು, ಪ್ರತಿವಾದಿ-1 ಒಂದು ಕಂಪನಿಯಾಗಿದ್ದು, ಇದರ ಪಾಲುದಾರರು ಹತ್ತಿರದ ಸಂಬಂಧಿಗಳಾಗಿರುತ್ತಾರೆ. ಪ್ರತಿವಾದಿ-2 ರಿಂದ 4 ರವರು ಸಾಲಕ್ಕೆ ಖಾತರಿ ನೀಡಿದ ಕೂಡಲೇ ಪ್ರತಿವಾದಿ-1 ಆಸ್ತಿ ಹಾಗೂ ವ್ಯವಹಾರಕ್ಕೆ ಜವಾಬ್ದಾರರಾಗಿರುತ್ತಾರೆ.

ಇನ್ನು ಪ್ರತಿವಾದಿಗಳ ನಡವಳಿಕೆಗಳ ಬಗ್ಗೆ ಒಂದೆರಡು ಅಂಶಗಳನ್ನು ಪರಿಶೀಲಿಸುವುದು ಸೂಕ್ತವೆಂದು ಭಾವಿಸಲಾಗಿದೆ.

ಅಂಶ 1) : ಈ ದಾವೆಯಲ್ಲಿ ಪ್ರತಿವಾದಿಗಳು ವಕೀಲರ ಮೂಲಕ ನ್ಯಾಯಾಲಯದ ಕಲಾಪಗಳಿಗೆ ಹಾಜರಿದ್ದು, ಸಾಲದ ವ್ಯವಹಾರವನ್ನು ಒಪ್ಪಿದ್ದು, ಸಾಲ ಮರು ಪಾವತಿಸಲು ಕಾಲಾವಕಾಶ ಕೋರಿ, ಸಮಯ ಪಡೆದಿರುತ್ತಾರಾದರೂ (ದಿನಾಂಕ: 15-09-2012 ಮತ್ತು 18-02-2013) ಅದರಂತೆ ಕ್ರಮವಿಡದೇ ಒಂದಲ್ಲ ಒಂದು ರೀತಿ ನ್ಯಾಯಾಲಯದ ನಡವಳಿಗಳನ್ನು ವಿಳಂಬಗೊಳಿಸುತ್ತಿರುವುದನ್ನು ಗಮನಿಸಿದೆ. ಮೂಲ ದಾವಾ ಅರ್ಜಿಯಲ್ಲಿ ಒಳಗೊಂಡಿರುವ ಸ್ಥಿರಾಸ್ತಿಯ ಮಾಲೀಕರೆಂದು ಹೇಳಲಾದ ಕೆಲವರು ತಮ್ಮನ್ನು ದಾವೆಯಲ್ಲಿ ಅಗತ್ಯ ಪಕ್ಷಗಾರರನ್ನಾಗಿ ಮಾಡಿಕೊಳ್ಳಲು ಅರ್ಜಿ ಸಲ್ಲಿಸಿದ್ದು, ಈ ಅರ್ಜಿಗೆ ಪ್ರತಿವಾದಿ-2 ರಿಂದ 4 ರವರು ಯಾವುದೇ ಪ್ರತಿಕ್ರಿಯೆ ವ್ಯಕ್ತ ಪಡಿಸದೇ ಮೌನ ವಹಿಸಿರುವುದು ಪ್ರತಿವಾದಿಗಳು ಸಾಲ ತೀರುವಳಿ ಮಾಡುವುದನ್ನು ತಪ್ಪಿಸುವುದು ಅಥವಾ ವಿಳಂಬಗೊಳಿಸಿ ವಾದಿ-ಬ್ಯಾಂಕಿಗೆ ನಷ್ಟ ಮಾಡುವ ಉದ್ದೇಶ ಹೊಂದಿದ್ದಾರೆಂದು ವಾದಿಗಳ ಆಕ್ಷೇಪಣೆ ನಿಜವಿದ್ದಂತೆ ಭಾಸವಾಗುತ್ತದೆ.

ಅಂಶ 2) : ಈ ಹಿಂದೆ ದಿನಾಂಕ : 15-09-2012ರಂದು ಹೊರಡಿಸಿರುವ ತೀರ್ಪು ಪೂರ್ವ ಜಪ್ತಿ ಆದೇಶದಲ್ಲಿ ಪ್ರತಿವಾದಿ-1 ಕಂಪನಿಗೆ ಸೇರಿದ ಸ್ವತ್ತನ್ನು (ಸದರಿ ಆದೇಶದಲ್ಲಿ ಐಟಂ ನಂ. 1 ರಿಂದ 3) ಹಾಗೂ ಪ್ರತಿವಾದಿ-2 ಮತ್ತು 3 ರವರಿಗೆ ಸೇರಿದ (ಸ್ವತ್ತು ಐಟಂ ನಂ. 4ರ) ಸ್ವತ್ತನ್ನು ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಿ ದಿನಾಂಕ: 15-09-2012ರಂದು ಸ್ಥಿರೀಕರಿಸಿದ್ದು, ಈ ಬಗ್ಗೆ ಪ್ರತಿವಾದಿಗಳು ನ್ಯಾಯಾಲಯದ ನಡವಳಿಗಳಲ್ಲಿ ಪಾಲ್ಗೊಂಡಿದ್ದರೂ ಯಾವುದೇ ಆಕ್ಷೇಪಣೆ ವ್ಯಕ್ತಪಡಿಸಿರುವುದಿಲ್ಲ. ಆದರೆ ಈಗ ವಾದಿಯು ಸಾಲ ವಸೂಲಾತಿಗಾಗಿ ಸೂಕ್ತ ಭದ್ರತೆ ಕೊರತೆಯಿಂದ ಹೆಚ್ಚುವರಿ ಸ್ವತ್ತನ್ನು ಜಪ್ತಿಗೆ ಒಳಪಡಿಸಲು ಕ್ರಮವಿಟ್ಟಿರುವ ಈ ಸಂದರ್ಭದಲ್ಲಿ ಆಕ್ಷೇಪಣೆ ವ್ಯಕ್ತಪಡಿಸಿರುವುದು ಬಹುಶಃ ಹಿಂದಿನ ಜಪ್ತಿಗೆ ಒಳಪಟ್ಟಿರುವ ಸ್ವತ್ತು ತಕರಾರಿನಿಂದ ಕೂಡಿರುವ ಹಾಗೂ ಸಾಲ ಬಾಕಿ ಮೊತ್ತಕ್ಕಿಂತ ಕಡಿಮೆ ಮೌಲ್ಯದ ಸ್ವತ್ತನ್ನು ಒಳಗೊಂಡಿರುವುದರಿಂದಲೋ ಏನೋ ಆಕ್ಷೇಪಣೆ ಮಾಡಿಲ್ಲವೆಂದು ವಾದಿ ವಕೀಲರು ತಿಳಿಸಿರುವ ಅಂಶವು ನಿಜವೆಂದು ಕಂಡುಬರುತ್ತದೆ.

ಪ್ರಸ್ತುತ ಪ್ರಕರಣದಲ್ಲಿ ಈಗಾಗಲೇ ವಿವರಿಸಿರುವಂತೆ ಪ್ರತಿವಾದಿ-1 ಬ್ಯಾಂಕಿನ ಸದಸ್ಯತ್ವ ಪಡೆದಿದ್ದು, ಪ್ರತಿವಾದಿ-2ರವರು ಇದರ ವ್ಯವಸ್ಥಾಪಕ ಪಾಲುದಾರರಾಗಿ ಅರ್ಜಿ ಸಲ್ಲಿಸಿ ಸಾಲ ಮಂಜೂರು ಮಾಡಿಸಿಕೊಂಡು, ಸಾಲದ ನಿಯಮ ನಿಬಂಧನೆಗಳಿಗೆ ಒಪ್ಪಿ, ದಿನಾಂಕ: 08-12-2010ರಂದು ಸಾಲದ ಮೊಬಲಗಿಗೆ ಪ್ರೋನೋಟ್‌ನ್ನು ಮತ್ತೊಬ್ಬ ನಿರ್ದೇಶಕರ ಜೊತೆಗೂಡಿ ಬರೆದುಕೊಟ್ಟಿದ್ದು, ಎಲ್ಲಾ ಅಗತ್ಯ ದಾಖಲೆಗಳಿಗೆ ಸಹಿ ಮಾಡಿಕೊಟ್ಟು ದಿನಾಂಕ: 08-12-2010 ಮತ್ತು 09-12-2010ರಲ್ಲಿ ಕಂಪನಿಯ ಎಲ್ಲಾ ನಿರ್ದೇಶಕರು ಹಿಂಪಡೆಯಲಾಗದ ಮತ್ತು ವೈಯಕ್ತಿಕ ಖಾತರಿ (Irrevocable and

personal guarantee) ಕೊಟ್ಟಿರುತ್ತಾರೆ. ಸಾಲಕ್ಕೆ ಖಾತರಿಯಾಗಿ ಮೂಲ ದಾವಾ ಅರ್ಜಿಯಲ್ಲಿ ವಿವರಿಸಿರುವ ಸ್ಥಿರಾಸ್ತಿಯನ್ನು ಕಂಪನಿ ಪರ ಇದರ ವ್ಯವಸ್ಥಾಪಕ ಪಾಲುದಾರರಾದ ಪ್ರತಿವಾದಿ–2ರವರು ವಾದಿ–ಬ್ಯಾಂಕಿಗೆ ಆಧಾರ ಮಾಡಿಕೊಟ್ಟ ದಿನಾಂಕ: 06–12–2010ರಲ್ಲಿ ಹಿರಿಯ ಉಪ ನೋಂದಣಾಧಿಕಾರಿ, ಕಾಚರಕನಹಳ್ಳಿ, ಬೆಂಗಳೂರು, ಇಲ್ಲಿ ನೋಂದಾಯಿಸಿ ಕೊಟ್ಟಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಮಾನ್ಯ ನ್ಯಾಯಾಲಯದ ತೀರ್ಮಾನದ ಹಿನ್ನೆಲೆಯಲ್ಲಿ ಪ್ರತಿವಾದಿ–2 ರಿಂದ 4ರವರು ಪ್ರತಿವಾದಿ–1 ಕಂಪನಿಯ ಮೂಲಕ ಪ್ರತಿನಿಧಿಸಿರುವುದರಿಂದ ಇವರ ವಿರುದ್ಧ ಈ ನ್ಯಾಯಾಲಯದಲ್ಲಿ ಸದರಿ ದಾವೆಯು ಊರ್ಜಿತವಾಗಿರುತ್ತದೆಂದು ತೀರ್ಮಾನಿಸಲಾಗಿದೆ.

ಈ ದಾವೆಯಲ್ಲಿ ವಾದಿ–ಬ್ಯಾಂಕಿಗೆ ಪ್ರತಿವಾದಿಗಳು ಆಧಾರ ಮಾಡಿಕೊಟ್ಟಿರುವ ಸ್ವತ್ತು ಸಿವಿಲ್ ಮಿಸಲೇನಿಯಸ್ ಪೆಟಿಶನ್ ಸಂಖ್ಯೆ: ಸಿಎಂಪಿ ನಂ. 6/2012ರ ಆದೇಶಕ್ಕೆ ಒಳಪಟ್ಟಿರುವುದಾಗಿ ವಾದಿ ತಿಳಿಸಿದ್ದು, ಈ ಬಗ್ಗೆ ಪ್ರತಿವಾದಿಗಳು ಮೌನವಾಗಿರುವುದರಿಂದ ಒಂದು ವೇಳೆ ವಾದಿ ಪರ ದಾವೆಯು ಇತ್ಯರ್ಥವಾದರೂ ಕೂಡ ಕೋರಿರುವ ಆಸ್ತಿಗಳನ್ನು ಜಪ್ತಿ ಆದೇಶ ಹೊರಡಿಸದಿದ್ದಲ್ಲಿ, ಅಗತ್ಯ ಆಸ್ತಿ ಭದ್ರತೆ ಇಲ್ಲದೇ ವಸೂಲಾತಿಗೆ ತೊಂದರೆಯಾಗುತ್ತದೆಂಬ ವಾದಿಯ ಕೋರಿಕೆ ಸಮಂಜಸವಾಗಿರುವುದರಿಂದ ಪ್ರತಿವಾದಿಗಳ ಆಕ್ಷೇಪಣೆಯನ್ನು ತಿರಸ್ಕರಿಸಿ ವಾದಿಯ ಮಧ್ಯಂತರ ಅರ್ಜಿಯನ್ನು ಪುರಸ್ಕರಿಸಿ ಮಧ್ಯಂತರ ಅರ್ಜಿಯಲ್ಲಿ ಕೋರಿರುವ ಪ್ರತಿವಾದಿ–2 ಮತ್ತು 3 ರವರಿಗೆ ಸೇರಿರುವ ಷೆಡ್ಯೂಲ್ ಸ್ವತ್ತನ್ನು ತೀರ್ಪು ಪೂರ್ವ ಜಪ್ತಿ ಆದೇಶವನ್ನು ಈ ಕೆಳಕಂಡಂತೆ ಹೊರಡಿಸಲಾಗಿದೆ.

**ಆದೇಶ**

**ವಾದಿಯು ಕಲಂ 103ರಡಿ ಸಲ್ಲಿಸಿರುವ ಅರ್ಜಿಯನ್ನು ಪುರಸ್ಕರಿಸಿದೆ**

ಪ್ರತಿವಾದಿಗಳು ಈ ಕೆಳಕಂಡ ಷೆಡ್ಯೂಲ್ ಸ್ವತ್ತನ್ನು ಯಾರಿಗೂ ಪರಭಾರೆ ಮತ್ತು ಋಣಬಾರವನ್ನು ಮಾಡದಂತೆ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರಡಿ ಷರತ್ತಿಗೊಳಪಟ್ಟು ಜಪ್ತಿ ಮಾಡಿ ಆದೇಶಿಸಿದೆ. ಈ ಆದೇಶವನ್ನು ತೆರವುಗೊಳಿಸಲು ಇಚ್ಚಿಸಿದಲ್ಲಿ, ದಿನಾಂಕ: 31–03–2012ಕ್ಕೆ ಇದ್ದಂತೆ ಬಾಕಿ ರೂ. 9,18,67,602/– (ರೂ. ಒಂಬತ್ತು ಕೋಟಿ ಹದಿನೆಂಟು ಲಕ್ಷ ಅರವತ್ತೇಳು ಸಾವಿರದ ಆರು ನೂರಾ ಎರಡು ಮಾತ್ರ)ಗಳನ್ನು ಮತ್ತು ದಿನಾಂಕ: 01–04–2013ರಿಂದ ಅಸಲು ರೂ. 7,97,00,000/– ಗಳ ಮೇಲೆ ಶೇಕಡ 14.50ರ ಬಡ್ಡಿಯೊಂದಿಗೆ ವಾದಿ–ಬ್ಯಾಂಕಿನಲ್ಲಿ ವಾದಿಯ ಹೆಸರಿನಲ್ಲಿ ಠೇವಣಿ ಮಾಡಿ ಠೇವಣಿ ಮಾಡಿದ ಬಗ್ಗೆ ದಾಖಲೆಗಳನ್ನು ಈ ನ್ಯಾಯಾಲಯ ಆದೇಶ ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗೆ ಹಾಜರುಪಡಿಸಲು ಈ ಮೂಲಕ ತಿಳಿಯಪಡಿಸಲಾಗಿದೆ. ಇದಕ್ಕೆ ತಪ್ಪಿದಲ್ಲಿ ಈ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಪ್ರಕರಣದ ಮುಂದಿನ ವಿಚಾರಣೆಯನ್ನು ದಿನಾಂಕ; 03–03–2014ರಂದು ಬೆಳಿಗ್ಗೆ 11.00 ಗಂಟೆಗೆ ನಿಗದಿಪಡಿಸಲಾಗಿದೆ.

**ಷೆಡ್ಯೂಲ್**

All that piece and parcel of the site bearing No:164, situated at AECS Layout, 1st Stage, Geddalahalli, Bengaluru, relating to the plots measuring 27-30 Acres ub Sy.Nos:12/1, 12/3, 24/3, 31/3, 32/1, 32/3, 32/4, 33/2, 35/2, 36/3 and 39/1 of Geddalahalli village, Bengaluru North Taluk, Bengaluru measuring East to West 61 feet and North to South 40 feet in all measuring 2440 Sq.Ft and bounded on the:

| | | |
|---|---|---|
| East by | : | Site No:162, |
| West by | : | Road |
| North by | : | Private Property |
| South by | : | Site No: 165. |

ದಿನಾಂಕ: 30–01–2014ರಂದು ನ್ಯಾಯಾಲಯದ ಮೊಹರಿನೊಂದಿಗೆ ಕೊಡಲ್ಪಟ್ಟಿದೆ.

..............................................,

**ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ. 441)**
**ದಾವಾ ಪಂಚಾಯ್ತಿ ನ್ಯಾಯಾಲಯ,**
**ಕ.ರಾ.ಸ. ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು–18**

**PD 24**
**SC 05**

## ಪೊಲೀಸ್ ಇಲಾಖೆ

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ: 47/ಅಸೂ/ಡಿಸಿಪಿ/ಸಂವಿ/2014, ದಿನಾಂಕ: 24ನೇ ಫೆಬ್ರವರಿ, 2014**

ಬೆಂಗಳೂರು ನಗರ – ಬ್ಯಾಟರಾಯನಪುರ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿರುವ ಬೆಂಗಳೂರು–ಮೈಸೂರು ರಾಜ್ಯ ಹೆದ್ದಾರಿಯಲ್ಲಿ ಬಿ.ಬಿ.ಎಂ.ಪಿ. ವತಿಯಿಂದ ಕರ್ನಾಟಕ ವಿದ್ಯುತ್ ಕಾರ್ಖಾನೆಯ ಬಳಿ ಇರುವ ವೃಷಭಾವತಿ ಕಾಲುವೆಗೆ ನಿರ್ಮಿಸಿರುವ ಸೇತುವೆಯು ದುರಸ್ಥಿಯಾಗಿದ್ದು, ಈ ಸೇತುವೆಯನ್ನು ಕೆಡವಿ ಹೊಸದಾಗಿ ಸೇತುವೆ ನಿರ್ಮಾಣ ಮಾಡುವ ಕಾಮಗಾರಿಯನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಕೈಗೊಳ್ಳಲಿದೆ. ಈ ಹಿನ್ನೆಲೆಯಲ್ಲಿ 6 ತಿಂಗಳುಗಳ ಕಾಲ ತಾತ್ಕಾಲಿಕವಾಗಿ ಮೈಸೂರು ರಸ್ತೆಯ ಕಿಂಕೋ ಜಂಕ್ಷನ್ ಕಡೆಯಿಂದ ಸಿರ್ಸಿ ವೃತ್ತದ ಕಡೆಗೆ ಬರುವ ಅಂದರೆ ಪಶ್ಚಿಮದಿಂದ

ಪೂರ್ವದ ಕಡೆಗೆ ಬರುವ ಎಲ್ಲಾ ರೀತಿಯ ವಾಹನಗಳ ಸಂಚಾರವನ್ನು ನಿರ್ಬಂಧಿಸಬೇಕಾಗಿರುತ್ತದೆ. ಇದಲ್ಲದೆ, ವಿಜಯನಗರದಿಂದ ಮೈಸೂರು ರಸ್ತೆ ಕಡೆಗೆ ಬರುವ ಅಂದರೆ ಉತ್ತರದಿಂದ ದಕ್ಷಿಣದ ಕಡೆಗೆ ಬರುವ ಎಲ್ಲಾ ರೀತಿಯ ವಾಹನಗಳ ಸಂಚಾರವನ್ನು (ಹೊಸದಾಗಿ ನಿರ್ಮಿಸಿರುವ ಬಾಪೂಜಿನಗರ ಸೇತುವೆಯಿಂದ ಕಿಂಕೋ ಜಂಕ್ಷನ್‌ವರೆಗೆ) ನಿರ್ಬಂಧಿಸುವುದು ಸಹ ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಘವೇಂದ್ರ ಔರಾದಕರ್, ಐ.ಪಿ.ಎಸ್., ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಬ್ಯಾಟರಾಯನಪುರ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ವಾಹನಗಳ ಮಾರ್ಗ ಬದಲಾವಣೆ ಈ ಕೆಳಕಂಡಂತೆ ಮಾರ್ಪಾಡು ಮಾಡಿ ಆದೇಶಿಸಿರುತ್ತೇನೆ.

1. ಮೈಸೂರು ಕಡೆಯಿಂದ ಸಿರ್ಸಿ ವೃತ್ತದ ಕಡೆಗೆ ಬರುವ ಅಂದರೆ ಪಶ್ಚಿಮದಿಂದ ಪೂರ್ವದ ಕಡೆಗೆ ಬರುವ ವಾಹನಗಳು ಕಿಂಕೋ ಜಂಕ್ಷನ್ ಬಳಿ ಕಡ್ಡಾಯವಾಗಿ ಎಡ ತಿರುವು ಪಡೆದು ದೀಪಾಂಜಲಿ ನಗರದ ಬಳಿ ಬಲ ತಿರುವು ಪಡೆದು ಹೊಸದಾಗಿ ನಿರ್ಮಿಸಿರುವ ಸೇತುವೆಯ ಮೇಲೆ ಸಂಚರಿಸಿ ಬಾಪೂಜಿನಗರ ಜಂಕ್ಷನ್ ಬಳಿ ಮೈಸೂರು ರಸ್ತೆಯನ್ನು ಸೇರಿ ಮುಂದುವರಿದ ಮಾರ್ಗಗಳಲ್ಲಿ ಸಂಚರಿಸಲು ವ್ಯವಸ್ಥೆ ಕಲ್ಪಿಸಲಾಗಿದೆ.
2. ವೆಸ್ಟ್ ಆಫ್ ಕಾರ್ಡ್ ರಸ್ತೆಯಲ್ಲಿ ವಿಜಯನಗರದ ಕಡೆಯಿಂದ ಮೈಸೂರು ರಸ್ತೆಯ ಕಡೆಗೆ ಅಂದರೆ ಉತ್ತರದಿಂದ ದಕ್ಷಿಣದ ಕಡೆಗೆ ಸಂಚರಿಸುವ ವಾಹನಗಳು ಕಡ್ಡಾಯವಾಗಿ ಎಡ ತಿರುವು ಪಡೆದು ದೀಪಾಂಜಲಿ ನಗರದ ಬಳಿ ಹೊಸದಾಗಿ ನಿರ್ಮಿಸಿರುವ ಸೇತುವೆಯ ಮೇಲೆ ಸಂಚರಿಸಿ ಬಾಪೂಜಿನಗರ ಜಂಕ್ಷನ್ ಬಳಿ ಮೈಸೂರು ರಸ್ತೆಯನ್ನು ಸೇರಿ ಸಂಚರಿಸಬಹುದಾಗಿದೆ. ಅಲ್ಲದೆ ಹೊಸಕೆರೆಹಳ್ಳಿ, ಬ್ಯಾಟರಾಯನಪುರ, ಬನಶಂಕರಿ ಕಡೆಗೆ ಸಾಗುವ ವಾಹನಗಳು ಮೈಸೂರು ರಸ್ತೆಯ ಕೆ.ಎಸ್.ಆರ್.ಟಿ.ಸಿ. ಜಂಕ್ಷನ್ ಬಳಿ "ಯು" ತಿರುವು ಪಡೆದು ಅವಶ್ಯಕ ಮಾರ್ಗದಲ್ಲಿ ಮುಂದುವರಿಸಲು ಅನುವು ಮಾಡಿಕೊಡಲಾಗಿದೆ.
3. ಮೈಸೂರು ಮುಖ್ಯ ರಸ್ತೆಯಲ್ಲಿ ಮೈಸೂರು ಕಿಂಕೋ ಜಂಕ್ಷನ್‌ನಿಂದ ಗಾಳಿ ಆಂಜನೇಯ ಟೆಂಪಲ್‌ವರೆಗೆ ಪಶ್ಚಿಮದಿಂದ ಪೂರ್ವದ ಕಡೆಗೆ ಸಂಚರಿಸುವ ಎಲ್ಲಾ ಮಾದರಿಯ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ.
4. ವೆಸ್ಟ್ ಆಫ್ ಕಾರ್ಡ್ ರಸ್ತೆಯ ದೀಪಾಂಜಲಿನಗರದ ಹೊಸ ಸೇತುವೆಯಿಂದ ಕಿಂಕೋ ಜಂಕ್ಷನ್‌ವರೆಗೆ (ಉತ್ತರದಿಂದ ದಕ್ಷಿಣದ ಕಡೆಗೆ) ಎಲ್ಲಾ ಮಾದರಿಯ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ಸಂಚಾರ ಮಾರ್ಪಾಡುಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಪೊಲೀಸ್ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 28–02–2014ರಿಂದ 6 ತಿಂಗಳ ಕಾಲ ಜಾರಿಯಲ್ಲಿರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 24ನೇ ಫೆಬ್ರವರಿ, 2014 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ರಾಘವೇಂದ್ರ ಔರಾದಕರ್,**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ

**PR 151**

## GOVERNMENT OF KARNATAKA

## DIRECTORATE OF ECONOMICS AND STATISTICS, BANGALORE-1

### Consumer Price Index Numbers for Industrial Workers

### No. DES/24/PWX/2014, dated 03-03-2014

**State : Karnataka** **Base : 1987-88=100** **Month : January**

**Date:03-03-2014**

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| **I.** | **FOOD:** | | | | | | | | | | | |
| | (a) Cereals & Cereals Products | 902 | 954 | 1081 | 847 | 829 | 977 | 990 | 1019 | 801 | 1000 | 951 |
| | (b) Pulses & Pulses Products | 698 | 757 | 790 | 909 | 719 | 731 | 758 | 789 | 704 | 738 | 715 |
| | (c) Oil & Fats | 451 | 460 | 495 | 460 | 449 | 486 | 446 | 493 | 381 | 481 | 422 |

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| | (d) Meat, Fish & Eggs | 929 | 1047 | 1120 | 1013 | 1022 | 1033 | 975 | 1032 | 685 | 1190 | 1064 |
| | (e) Milk & Milk Products | 723 | 672 | 791 | 852 | 724 | 802 | 722 | 783 | 684 | 749 | 690 |
| | (f) Condiments & Spices | 676 | 689 | 1052 | 985 | 666 | 639 | 728 | 723 | 626 | 798 | 722 |
| | (g) Vegetables & Fruits | 789 | 784 | 905 | 946 | 838 | 776 | 728 | 910 | 760 | 656 | 1084 |
| | (h) Other Food | 597 | 841 | 841 | 762 | 716 | 593 | 667 | 694 | 722 | 680 | 618 |
| | **FOOD GROUP INDEX** | **769** | **826** | **934** | **836** | **757** | **791** | **814** | **884** | **711** | **844** | **809** |
| **II.** | Pan, Supari, Tobacco & Intoxicants | 836 | 1057 | 905 | 846 | 701 | 868 | 771 | 829 | 587 | 738 | 857 |
| **III.** | Fuel & Light | 671 | 651 | 696 | 767 | 687 | 670 | 622 | 750 | 572 | 893 | 509 |
| **IV.** | Housing | 100 | 100 | 100 | 100 | 100 | 100 | 100 | 100 | 100 | 100 | 100 |
| **V.** | Clothing, Bedding & Footwear | 334 | 553 | 483 | 457 | 403 | 439 | 601 | 719 | 352 | 708 | 235 |
| **VI.** | **Miscellaneous:** | | | | | | | | | | | |
| | (a) Medical Care | 751 | 966 | 623 | 492 | 387 | 331 | 675 | 634 | 465 | 507 | 321 |
| | (b) Education, Recreation & Amusement | 786 | 791 | 1102 | 488 | 942 | 1148 | 826 | 640 | 1125 | 1530 | 1006 |
| | (c) Transport & Communication | 703 | 751 | 673 | 659 | 868 | 720 | 754 | 942 | 766 | 656 | 730 |
| | (d) Personal Car & effects | 423 | 497 | 570 | 564 | 600 | 457 | 482 | 509 | 523 | 466 | 454 |
| | (e) Other | 543 | 513 | 659 | 800 | 468 | 485 | 540 | 686 | 389 | 673 | 469 |
| | Miscellaneous Group | 602 | 658 | 710 | 598 | 639 | 617 | 621 | 640 | 626 | 714 | 568 |
| | **GENERAL INDEX** | **627** | **679** | **739** | **680** | **610** | **632** | **676** | **735** | **598** | **727** | **558** |
| | To convert to Base 1960 Multiply by Linking Factor. | **7.39** | **9.19** | **8.27** | **-** | **8.26** | **8.56** | **9.25** | **7.92** | **9.31** | **-** | **-** |

ಜಂಟಿ ನಿರ್ದೇಶಕರು,
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಕರ್ನಾಟಕ ಸರ್ಕಾರ, ಬೆಂಗಳೂರು

**Government of India**
**Ministry of Labour**
**Labour Bureau**

**NO. 112/1 (KTK) /2014 CPI Dated: 5th March, 2014**

**Consumer Price Index Numbers for Industrial Workers (Base : 2001=100)**

**Month : January, 2014**

| Group/Sub-Group/Centre | BELGAUM | BANGALORE | HUBLI DHARWAD | MERCARA | MYSORE |
|---|---|---|---|---|---|
| **FOOD :** | | | | | |
| (a) Cereals & Cereals Products | 263 | 280 | 259 | 263 | 295 |
| (b) Pulses & Products | 251 | 231 | 256 | 261 | 241 |
| (c) Oils & Fats | 244 | 234 | 209 | 267 | 217 |

| Group/Sub-Group/Centre | BELGAUM | BANGALORE | HUBLI DHARWAD | MERCARA | MYSORE |
|---|---|---|---|---|---|
| (d) Meat, Fish & Eggs | 364 | 336 | 351 | 297 | 331 |
| (e) Milk & Milk Products | 296 | 270 | 250 | 265 | 288 |
| (f) Condiments & Spices | 241 | 282 | 288 | 269 | 303 |
| (g) Vegetables & Fruits | 330 | 261 | 268 | 275 | 274 |
| (h) Other Food | 261 | 293 | 261 | 267 | 266 |
| **FOOD GROUP** | 277 | 278 | 264 | 270 | 281 |
| Pan, Supari, Tobacco & Intoxicants | 244 | 239 | 269 | 225 | 271 |
| Fuel & Light | 200 | 179 | 204 | 348 | 198 |
| Housing index | 237 | 219 | 335 | 102 | 264 |
| Clothing, Bedding & Footwear | 169 | 146 | 161 | 183 | 157 |
| Miscellaneous | | | | | |
| (a) Medical care | 201 | 251 | 217 | 221 | 190 |
| (b) Education, Recreation and Amusement | 170 | 174 | 174 | 328 | 133 |
| (c) Transport and Communication | 288 | 313 | 302 | 245 | 272 |
| (d) Personal Care & Effects | 192 | 235 | 208 | 201 | 211 |
| (e) Others | 229 | 218 | 225 | 210 | 266 |
| Miscellaneous Group | 213 | 245 | 227 | 235 | 208 |
| **GENERAL INDEX** | 246 | 244 | 256 | 246 | 249 |

1. The Director, Directorate of Economic and Statistics, Multistoreyed Building, Dr. B.R. Ambedekar Veedhi, Bangalore-560001.
2. The Labour Commissioner, Government of Karnataka, Karmic Bhavan, Bannerkhetty Road, Bangalore-560029.
3. The Deputy Director, Labour Bureau, (SR) E-I-A, Rajaji Bhavan, Besant Nagar, Chennai- 600 090.

**ಜಂಟಿ ನಿರ್ದೇಶಕರು,**
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಕರ್ನಾಟಕ ಸರ್ಕಾರ, ಬೆಂಗಳೂರು

**P.R. 185** **L.R. CHAUHAN**
**SC 05** ECONOMIC OFFICER

## ಔಷಧ ನಿಯಂತ್ರಣ ಇಲಾಖೆ

## ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಛೇರಿ, ಅರಮನೆ ರಸ್ತೆ, ಬೆಂಗಳೂರು–560001

**ಕಛೇರಿ ಆದೇಶ ಸಂಖ್ಯೆ: ಔನಿಇ/237/ಸಿಬ್ಬಂದಿ/2013–14, ದಿನಾಂಕ: 23–09–2013**

**ವಿಷಯ:** ಇಲಾಖೆಯ ಗ್ರೂಪ್–ಎ ಅಧಿಕಾರಿಗಳಾದ ಸಹಾಯಕ ಔಷಧ ನಿಯಂತ್ರಕರ ವರ್ಗಾವಣೆಯ ಮೇರೆಗೆ ಸ್ಥಳನಿಯುಕ್ತಿ ಕುರಿತು.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 191 ಐಎಂಎಂ 2013, ದಿನಾಂಕ 23–09–2013.

ಉಲ್ಲೇಖಿತ ಸರ್ಕಾರದ ಅಧಿಸೂಚನೆಯ ಮೇರೆಗೆ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಹಾಯಕ ಔಷಧ ನಿಯಂತ್ರಕರನ್ನು ವರ್ಗಾವಣೆ ಮಾಡಿ ಆದೇಶ ಹೊರಡಿಸಲಾಗಿರುವುದರಿಂದ, ಅವರು ಈ ಕೆಳಕಂಡಂತೆ ಪ್ರಭಾರವನ್ನು ವಹಿಸಿಕೊಳ್ಳಲು ಮತ್ತು ವಹಿಸಿಕೊಡಲು ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಹಾಗೂ ಕಾರ್ಯ ನಿರ್ವಹಣಾ ಸ್ಥಳ | ವರ್ಗಾವಣೆ ಮೇರೆಗೆ ಸ್ಥಳನಿಯುಕ್ತಿಗೊಂಡ ಕಛೇರಿ | ಪ್ರಭಾರ ವಹಿಸಿಕೊಡುವ ಹಾಗೂ ವಹಿಸಿಕೊಳ್ಳುವ ಬಗ್ಗೆ |
|---|---|---|---|
| 1. | ಶ್ರೀ ಅಜಯರಾಜ್ ಡಿ.ಷಾ., ಸಹಾಯಕ ಔಷಧ ನಿಯಂತ್ರಕರು (ಸ್ವತಂತ್ರ ಪ್ರಭಾರ), – ನೇಮಕಾತಿ ನಿರೀಕ್ಷಣೆಯಲ್ಲಿರುವವರು | ಸಹಾಯಕ ಔಷಧ ನಿಯಂತ್ರಕರ ಕಛೇರಿ, ಕೋಲಾರ ವೃತ್ತ, ಕೋಲಾರ | ಸದರಿ ಅಧಿಕಾರಿಯವರು ಶ್ರೀ ಆರ್. ವೆಂಕಟೇಶ ರೆಡ್ಡಿ, ಸಹಾಯಕ ಔಷಧ ನಿಯಂತ್ರಕರು, ಚಿಕ್ಕಬಳ್ಳಾಪುರ ವೃತ್ತ, ಚಿಕ್ಕಬಳ್ಳಾಪುರ ರವರಿಂದ, ಅವರು ಅಧಿಕ ಪ್ರಭಾರವಾಗಿ ಹೊಂದಿರುವ ಕೋಲಾರ ವೃತ್ತದ ಸಹಾಯಕ ಔಷಧ ನಿಯಂತ್ರಕರ ಹುದ್ದೆಯ ಪ್ರಭಾರವನ್ನು ವಹಿಸಿಕೊಂಡು ಸ್ವತಂತ್ರ ಪ್ರಭಾರದ ಮೇರೆಗೆ ನಿರ್ವಹಿಸುವುದು. |

ಸಂಬಂಧಪಟ್ಟ ಸಹಾಯಕ ಔಷಧ ನಿಯಂತ್ರಕರುಗಳು ತಮ್ಮ ಹುದ್ದೆಯ ಪ್ರಭಾರವನ್ನು ತಕ್ಷಣದಿಂದ ಜಾರಿಗೆ ಬರುವಂತೆ ವಹಿಸಿಕೊಡುವ ಹಾಗೂ ವಹಿಸಿಕೊಳ್ಳುವ ಪ್ರಕ್ರಿಯೆಯನ್ನು ಮುಗಿಸತಕ್ಕದ್ದು ಹಾಗೂ ತಮ್ಮ ಬಳಿ ಇರುವ ಯಾವುದೇ ತನಿಖಾ ಕಡತಗಳನ್ನು, ವಶಪಡಿಸಿಕೊಂಡ ದಾಖಲೆ, ಮುದ್ದೆಮಾಲ್ ಇತ್ಯಾದಿಗಳನ್ನು 2–3 ದಿನಗಳಲ್ಲಿ ಎಲ್ಲಾ ವಿವರಗಳೊಂದಿಗೆ ಹಸ್ತಾಂತರಿಸಿ, ವರದಿಯನ್ನು ಕೇಂದ್ರ ಕಛೇರಿಗೆ ಸಲ್ಲಿಸಲು ಆದೇಶಿಸಿದೆ.

'ಔಷಧ ನಿಯಂತ್ರಕರಿಂದ ಅನುಮೋದಿತ'

**ರಘುರಾಮ ಭಂಡಾರಿ,**
ಅಪರ ಔಷಧ ನಿಯಂತ್ರಕರು
ಔಷಧ ನಿಯಂತ್ರಕರ ಪರವಾಗಿ

**PR. 195**

## ಔಷಧ ನಿಯಂತ್ರಣ ಇಲಾಖೆ

## ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಛೇರಿ, ಅರಮನೆ ರಸ್ತೆ, ಬೆಂಗಳೂರು–560001

**ಕಛೇರಿ ಆದೇಶ ಸಂಖ್ಯೆ: ಔನಿಇ/237/ಸಿಬ್ಬಂದಿ/2013–14, ದಿನಾಂಕ: 27–08–2013**

**ವಿಷಯ:** ಇಲಾಖೆಯ ಗ್ರೂಪ್–ಎ ಅಧಿಕಾರಿಗಳಾದ ಸಹಾಯಕ ಔಷಧ ನಿಯಂತ್ರಕರ ವರ್ಗಾವಣೆಯ ಮೇರೆಗೆ ಸ್ಥಳನಿಯುಕ್ತಿ ಕುರಿತು.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 113 ಐಎಂಎಂ 2013, ದಿನಾಂಕ 25–06–2013.
2. ಈ ಕಛೇರಿಯ ಇದೇ ಸಮಸಂಖ್ಯೆಯ ಆದೇಶ ದಿನಾಂಕ 25–06–2013.
3. ಅರ್ಜಿ ಸಂಖ್ಯೆ : 3533/2013 ರ ಮೇರೆಗಿನ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಆದೇಶ ದಿನಾಂಕ 12–08–2013.
4. ಸರ್ಕಾರದ ಪತ್ರ ಸಂಖ್ಯೆ : ಆಕುಕ 134 ಐಎಂಎಂ 2013, ದಿನಾಂಕ 26–08–2013.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದ ಉಲ್ಲೇಖ (4)ರ ಸರ್ಕಾರದ ಪತ್ರದಲ್ಲಿ, ಉಲ್ಲೇಖ (1)ರ ಅಧಿಸೂಚನೆಯನ್ನು ಪ್ರಶ್ನಿಸಿ ಶ್ರೀಮತಿ ಗೀತಾಕುಮಾರಿದಾಸ್, ಸಹಾಯಕ ಔಷಧ ನಿಯಂತ್ರಕರು, ಕೋಲಾರ ವೃತ್ತ ರವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ದಾಖಲಿಸಲಾಗಿದ್ದ ಅರ್ಜಿ ಸಂಖ್ಯೆ 3533/2013 ರಲ್ಲಿ ದಿನಾಂಕ 12–08–2013 ರಂದು ಅಂತಿಮ ಆದೇಶ ಹೊರಡಿಸಿರುವ ಮಾನ್ಯ ನ್ಯಾಯಾಲಯವು ಅರ್ಜಿಯನ್ನು ವಜಾಗೊಳಿಸಿ ಅರ್ಜಿದಾರರಿಗೆ ವರ್ಗಾಯಿಸಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗಲು ನಿರ್ದೇಶನ ನೀಡಿರುವುದಾಗಿ ತಿಳಿಸಿರುವುದರಿಂದ, ಉಲ್ಲೇಖ (1)ರ ಅಧಿಸೂಚನೆ ಹಾಗೂ ಉಲ್ಲೇಖ (2)ರ ಆದೇಶಗಳನ್ನು ತಕ್ಷಣದಿಂದ ಜಾರಿಗೊಳಿಸಲಾಗಿದೆ.

ಸಂಬಂಧಪಟ್ಟ ಅಧಿಕಾರಿಗಳು ಅನುಷ್ಠಾನ ವರದಿ ಸಲ್ಲಿಸಲು ಆದೇಶಿಸಿದೆ.

**ರಘುರಾಮ ಭಂಡಾರಿ,**
ಅಪರ ಔಷಧ ನಿಯಂತ್ರಕರು
ಔಷಧ ನಿಯಂತ್ರಕರ ಪರವಾಗಿ

**PR. 196**

## ಔಷಧ ನಿಯಂತ್ರಣ ಇಲಾಖೆ

## ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಛೇರಿ, ಅರಮನೆ ರಸ್ತೆ, ಬೆಂಗಳೂರು–560001

**ಕಛೇರಿ ಆದೇಶ ಸಂಖ್ಯೆ: ಔನಿಇ/571/ಸಿಬ್ಬಂದಿ/2013–14, ದಿನಾಂಕ: 07–02–2014**

**ವಿಷಯ:** ಇಲಾಖೆಯ ಗ್ರೂಪ್–ಎ ಅಧಿಕಾರಿಗಳಾದ ಸಹಾಯಕ ಔಷಧ ನಿಯಂತ್ರಕರ ವರ್ಗಾವಣೆಯ ಮೇರೆಗೆ ಸ್ಥಳನಿಯುಕ್ತಿ ಕುರಿತು.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 279 ಐಎಂಎಂ 2013, ದಿನಾಂಕ 06-02-2014.

ಉಲ್ಲೇಖಿತ ಸರ್ಕಾರದ ಅಧಿಸೂಚನೆಯ ಮೇರೆಗೆ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಹಾಯಕ ಔಷಧ ನಿಯಂತ್ರಕರನ್ನು ವರ್ಗಾವಣೆ ಮಾಡಿ ಆದೇಶ ಹೊರಡಿಸಲಾಗಿರುವುದರಿಂದ, ಅವರು ಈ ಕೆಳಕಂಡಂತೆ ಪ್ರಭಾರವನ್ನು ವಹಿಸಿಕೊಳ್ಳಲು ಮತ್ತು ವಹಿಸಿಕೊಡಲು ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಹಾಗೂ ಕಾರ್ಯ ನಿರ್ವಹಣಾ ಸ್ಥಳ | ವರ್ಗಾವಣೆ ಮೇರೆಗೆ ಸ್ಥಳನಿಯುಕ್ತಿಗೊಂಡ ಕಛೇರಿ | ಪ್ರಭಾರ ವಹಿಸಿಕೊಡುವ ಹಾಗೂ ವಹಿಸಿಕೊಳ್ಳುವ ಬಗ್ಗೆ |
|---|---|---|---|
| 1. | ಶ್ರೀ ಕೆ.ಎಸ್. ಮಲ್ಲಿಕಾರ್ಜುನ, ಸಹಾಯಕ ಔಷಧ ನಿಯಂತ್ರಕರು ಉತ್ತರ ಕನ್ನಡ ವೃತ್ತ, ಕಾರವಾರ | ಸಹಾಯಕ ಔಷಧ ನಿಯಂತ್ರಕರ ಕಛೇರಿ, ಬೆಂಗಳೂರು ವೃತ್ತ-1, ಬೆಂಗಳೂರು | ಸದರಿ ಅಧಿಕಾರಿಯವರು ಅವರ ಹಾಲಿ ಹುದ್ದೆಯ ಪ್ರಭಾರವನ್ನು ಶ್ರೀ ರಮಾಕಾಂತ್ ಆರ್. ಕುಂತೆ, ಸಹಾಯಕ ಔಷಧ ನಿಯಂತ್ರಕರು, ಧಾರವಾಡ ವೃತ್ತ, ಹುಬ್ಬಳ್ಳಿ ಇವರಿಗೆ ವಹಿಸಿಕೊಟ್ಟು, ತದನಂತರ ಸಹಾಯಕ ಔಷಧ ನಿಯಂತ್ರಕರ ಕಛೇರಿ, ಬೆಂಗಳೂರು ವೃತ್ತ-1, ಇಲ್ಲಿ ನೂತನವಾಗಿ ಸೃಜನೆಯಾಗಿರುವ ಸಹಾಯಕ ಔಷಧ ನಿಯಂತ್ರಕರು-2 ಹುದ್ದೆಯ ಪ್ರಭಾರವನ್ನು ವಹಿಸಿಕೊಂಡು ನಿರ್ವಹಿಸುವುದು. |

ಶ್ರೀ ರಮಾಕಾಂತ್ ಆರ್. ಕುಂತೆರವರು ಉತ್ತರ ಕನ್ನಡ ವೃತ್ತದ ಸಹಾಯಕ ಔಷಧ ನಿಯಂತ್ರಕರ ಹುದ್ದೆಯ ಅಧಿಕ ಪ್ರಭಾರವನ್ನು ವಹಿಸಿಕೊಂಡು, ತಮ್ಮ ಹಾಲಿ ಹುದ್ದೆಯ ಕರ್ತವ್ಯಗಳೊಂದಿಗೆ ಹೆಚ್ಚುವರಿಯಾಗಿ ಹಾಗೂ ಸಮವರ್ತಿ ಪ್ರಭಾರದ ಮೇರೆಗೆ ನಿರ್ವಹಿಸುವುದು.

ಸಂಬಂಧಪಟ್ಟ ಸಹಾಯಕ ಔಷಧ ನಿಯಂತ್ರಕರುಗಳು ತಮ್ಮ ಹುದ್ದೆಯ ಪ್ರಭಾರವನ್ನು ತಕ್ಷಣದಿಂದ ಜಾರಿಗೆ ಬರುವಂತೆ ವಹಿಸಿಕೊಡುವ ಹಾಗೂ ವಹಿಸಿಕೊಳ್ಳುವ ಪ್ರಕ್ರಿಯೆಯನ್ನು ಮುಗಿಸತಕ್ಕದ್ದು ಹಾಗೂ ತಮ್ಮ ಬಳಿ ಇರುವ ಯಾವುದೇ ತನಿಖಾ ಕಡತಗಳನ್ನು, ವಶಪಡಿಸಿಕೊಂಡ ದಾಖಲೆ, ಮುದ್ದೆಮಾಲ್ ಇತ್ಯಾದಿಗಳನ್ನು 2-3 ದಿನಗಳಲ್ಲಿ ಎಲ್ಲಾ ವಿವರಗಳೊಂದಿಗೆ ಹಸ್ತಾಂತರಿಸಿ, ವರದಿಯನ್ನು ಕೇಂದ್ರ ಕಛೇರಿಗೆ ಸಲ್ಲಿಸಲು ಆದೇಶಿಸಿದೆ.

**PR. 198** **ಔಷಧ ನಿಯಂತ್ರಕರು (ಪ್ರಭಾರ)**
**SC. 25**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ನಅಇ 34 ಬೆಂರೂಪ್ರಾ 2014 ಬೆಂಗಳೂರು, ದಿನಾಂಕ: 24-02-2014

ಸರ್ಕಾರದ ಅಧಿಸೂಚನೆ ಸಂಖ್ಯೆ:ನಅಇ 680 ಅಪ್ರಾ 2008, ಬೆಂಗಳೂರು ದಿನಾಂಕ:11-09-2009ರನ್ವಯ ಗೌರಿಬಿದನೂರು ಪಟ್ಟಣಕ್ಕೆ ಪುರಸಭಾ ವ್ಯಾಪ್ತಿಗೆ ಸ್ಥಳೀಯ ಯೋಜನಾ ಪ್ರದೇಶವನ್ನು ಘೋಷಿಸಲಾಗಿತ್ತು. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 4(ಎ)ರಡಿಯಲ್ಲಿ ಸದರಿ ಅಧಿಸೂಚನೆಯನ್ನು ಮಾರ್ಪಾಡಿಸಿ ಗೌರಿಬಿದನೂರು ನಗರದ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಗೆ ಒಳಪಡುವ ಗ್ರಾಮಗಳ ವಿವರಗಳನ್ನು ಅನುಬಂಧ-1ಎ ಮತ್ತು ಅನುಬಂಧ-1ಬಿ ರಲ್ಲಿ ಹಾಗೂ ಗೌರಿಬಿದನೂರು ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರಗಳನ್ನು ಅನುಬಂಧ-11ರಲ್ಲಿ ನಮೂದಿಸಿ "**ಪರಿಷ್ಕೃತ ಸ್ಥಳೀಯ ಯೋಜನಾ ಪ್ರದೇಶ**"ವೆಂದು ಘೋಷಿಸಲಾಗಿದೆ.

### ಅನುಬಂಧ – 1ಎ

**ಗೌರಿಬಿದನೂರು ನಗರದ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಗೆ ಒಳಪಡುವ ಗ್ರಾಮಗಳ ವಿವರ**

**ಸರ್ಕಾರದ ಆದೇಶ ಸಂಖ್ಯೆ: ನಇ 680 ಅ.ಪ್ರಾ 2008, ದಿನಾಂಕ: 11-09-2009ರಂತೆ ಒಳಗೊಂಡಿರುವ ಗ್ರಾಮಗಳು**

| ಕ್ರ.ಸಂ. | ಗ್ರಾಮದ ಹೆಸರು | ವಿಸ್ತೀರ್ಣ (ಎಕರೆಗಳಲ್ಲಿ | ಜನಸಂಖ್ಯೆ – 2001ರಂತೆ |
|---|---|---|---|
| 1 | ಗೌರಿಬಿದನೂರು | | |
| 2 | ಹಿರೇಬಿದನೂರು (ಭಾಗಶಃ) | | |
| 3 | ಗುಂಡಾಪುರ (ಭಾಗಶಃ) | | |
| 4 | ಮಾದನಹಳ್ಳಿ (ಭಾಗಶಃ) | | |
| 5 | ಕರೇಕಲ್ಲಹಳ್ಳಿ (ಭಾಗಶಃ) | | |

| ಕ್ರ.ಸಂ. | ಗ್ರಾಮದ ಹೆಸರು | ವಿಸ್ತೀರ್ಣ (ಎಕರೆಗಳಲ್ಲಿ | ಜನಸಂಖ್ಯೆ – 2001ರಂತೆ |
|---|---|---|---|
| 6 | ದೇವರಹೊಸಹಳ್ಳಿ (ಭಾಗಶಃ) | | |
| 7 | ಕಲ್ಲೂಡಿ (ಭಾಗಶಃ) | | |
| | **ಒಟ್ಟು** | **9.60 ಚ.ಕಿ.ಮೀ** | **30537** |

ಸಂಖ್ಯೆ: ನಅಇ 34 ಬೆಂರೂಪ್ರಾ 2014

**ಟಿ.ಎಂ. ವಾಸುದೇವ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

## ಅನುಬಂಧ – 1ಬಿ

### ಉದ್ದೇಶಿತ ಗೌರಿಬಿದನೂರು ನಗರದ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಗೆ ಒಳಪಡುವ ಗ್ರಾಮಗಳ ವಿವರ

| ಕ್ರ.ಸಂ. | ಗ್ರಾಮದ ಹೆಸರು | ಸರ್ವೆ ನಂಬರ್‌ಗಳು | ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) | ಜನಸಂಖ್ಯೆ (2011) |
|---|---|---|---|---|
| 1 | ಗೌರಿಬಿದನೂರು–ಕಸಬಾ | ಪೂರ್ಣ ಕಂದಾಯ ಗ್ರಾಮ | 49.37 | 37947 |
| 2 | ಮಾದನಹಳ್ಳಿ | ಪೂರ್ಣ ಕಂದಾಯ ಗ್ರಾಮ | 341.16 | |
| 3 | ಕರೇಕಲ್ಲಹಳ್ಳಿ | ಪೂರ್ಣ ಕಂದಾಯ ಗ್ರಾಮ | 371.91 | |
| 4 | ಹಿರೇಬಿದನೂರು | ಪೂರ್ಣ ಕಂದಾಯ ಗ್ರಾಮ | 435.45 | 5815 |
| 5 | ಗುಂಡಾಪುರ | ಪೂರ್ಣ ಕಂದಾಯ ಗ್ರಾಮ | 249.70 | 1243 |
| 6 | ದೇವರಹೊಸಹಳ್ಳಿ | ಪೂರ್ಣ ಕಂದಾಯ ಗ್ರಾಮ | 145.69 | 1094 |
| 7 | ಮೂರುಮನೆಹಳ್ಳಿ | ಪೂರ್ಣ ಕಂದಾಯ ಗ್ರಾಮ | 52.21 | 18 |
| 8 | ವೀರ್ಲಗೊಲ್ಲಹಳ್ಳಿ | ಪೂರ್ಣ ಕಂದಾಯ ಗ್ರಾಮ | 276.41 | 576 |
| 9 | ಉಡಮಲೋಡು | ಪೂರ್ಣ ಕಂದಾಯ ಗ್ರಾಮ | 217.32 | 521 |
| 10 | ಮಿಟ್ಟೇನಹಳ್ಳಿ | ಪೂರ್ಣ ಕಂದಾಯ ಗ್ರಾಮ | 101.58 | 200 |
| 11 | ಪಟ್ಟಾಪುರ್ಲಹಳ್ಳಿ | ಪೂರ್ಣ ಕಂದಾಯ ಗ್ರಾಮ | 99.55 | 776 |
| 12 | ಗಂಗಸಂದ್ರ (ಭಾಗಶಃ) | 1–205, 226, 227, 231–258, 260–270, 327–498, 504, 505, 507–518, 544–585, 588–591, 596, 605–611, 620–631, 635–638 | 652.77 | 1843 |
| 13 | ಕಲ್ಲೂಡಿ (ಭಾಗಶಃ) | 1–47, 89–94, 107, 110–294, 327–366, 371–375, 394, 395, 397, 399–403, 413–418, 422, 447–459 & 463 | 588.97 | 2601 |
| 14 | ಗೊಟಕನಾಪುರ (ಭಾಗಶಃ) | 1–125, 157, 162–255, 257 & 262 | 267.91 | 1125 |
| **ಪ್ರಸ್ತಾವಿತ ಯೋಜನಾ ಪ್ರದೇಶದ ಒಟ್ಟು ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) & ಜನಸಂಖ್ಯೆ :** | | | **3850.00** | **53759** |
| **ಪ್ರಸ್ತಾವಿತ ಯೋಜನಾ ಪ್ರದೇಶದ ಒಟ್ಟು ವಿಸ್ತೀರ್ಣ & ಜನಸಂಖ್ಯೆ :** | | | **38.50 ಚ.ಕಿ.ಮೀ** | **53759** |

ಸಂಖ್ಯೆ: ನಅಇ 34 ಬೆಂರೂಪ್ರಾ 2014

**ಟಿ.ಎಂ. ವಾಸುದೇವ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಅನುಬಂಧ – II**

**ಗೌರಿಬಿದನೂರು ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರ:**

ಪ್ರಸ್ತಾವಿತ ಗೌರಿಬಿದನೂರು ಸ್ಥಳೀಯ ಯೋಜನಾ ಪ್ರದೇಶವು ಗೌರಿಬಿದನೂರು–ಗುಡಿಬಂಡೆ ಜಿಲ್ಲಾ ಹೆದ್ದಾರಿಯಲ್ಲಿರುವ ಕಲ್ಲೂಡಿ ಗ್ರಾಮದ ಈಶಾನ್ಯ ಗಡಿಯ ಭಾಗದಲ್ಲಿರುವ ಸ.ನಂ. 459ರ ಪೂರ್ವ ಭಾಗದ ಎಲ್ಲೆಯಿಂದ ದಕ್ಷಿಣಕ್ಕೆ ಸ.ನಂ. 89ರ ಗಡಿಯ ಮೂಲಕ ಸಾಗಿ ಪಶ್ಚಿಮಕ್ಕೆ ತಿರುಗಿ ಸ.ನಂ. 94,110,107ರ ಪೂರ್ವ ಎಲ್ಲೆಯ ಸಾಗಿ ಗೊಟಕನಾಪುರ ಗ್ರಾಮದ ಕೆರೆಯ ಪಶ್ಚಿಮ ದಂಡೆಯಲ್ಲಿ ಸಾಗಿ ದಕ್ಷಿಣಕ್ಕೆ ಸಾಗಿ ಸ.ನಂ. 125, 123, 121, 73, 72, 71, 73, 67, 66, 65, 64ರ ಪೂರ್ವ ಗಡಿಯ ನಂತರ ಪಶ್ಚಿಮಕ್ಕೆ ತಿರುಗಿ ಸ.ನಂ. 9 ಮತ್ತು 2ರ ದಕ್ಷಿಣ ಎಲ್ಲೆಯ ಮೂಲಕ ಸಾಗಿ ದಕ್ಷಿಣಕ್ಕೆ ತಿರುಗಿ ಸ.ನಂ. 1ರ ಪೂರ್ವ ಭಾಗದ ಗಡಿಯ ಮುಖೇನ ದಕ್ಷಿಣಕ್ಕೆ ತಿರುಗಿ ನಂತರ ಸ.ನಂ. 169ರ ಉತ್ತರ ಗಡಿಯ ಮೂಲಕ ಸಾಗಿ ಪೂರ್ವಕ್ಕೆ ತಿರುಗಿ ಸ.ನಂ. 167, 166, 181 ಮತ್ತು 163ರ ಉತ್ತರ ಗಡಿಯ ಮೂಲಕ ಸಾಗಿ ಸ.ನಂ.262ರ ಅಂಚಿನಲ್ಲಿ ಉತ್ತರಕ್ಕೆ ತಿರುಗಿ ಸ.ನಂ. 257ರ ಪಶ್ಚಿಮ ಗಡಿಯ ಮೂಲಕ ಸಾಗಿ ಪೂರ್ವಕ್ಕೆ ತಿರುಗಿ ಸ.ನಂ. 257ರ ಉತ್ತರ ಭಾಗದ ಎಲ್ಲೆಯ ಅಂಚಿನಿಂದ ಪಶ್ಚಿಮಕ್ಕೆ ತಿರುಗಿ ಗಂಗಸಂದ್ರ ಗ್ರಾಮದ ಸ.ನಂ. 498ರ ಈಶಾನ್ಯದ ಅಂಚಿನಿಂದ ದಕ್ಷಿಣಕ್ಕೆ ಸಾಗಿ ಸ.ನಂ. 504, 505, 507ರ ಪೂರ್ವ ಎಲ್ಲೆಯಲ್ಲಿ ಚಲಿಸಿ ಸ.ನಂ. 517ರ ಅಂಚಿನಿಂದ ಈಶಾನ್ಯಕ್ಕೆ ತಿರುಗಿ ಸ.ನಂ. 518ರ ಈಶಾನ್ಯದ ಅಂಚಿನಿಂದ ದಕ್ಷಿಣಕ್ಕೆ ತಿರುಗಿ ಸ.ನಂ. 546ರ ಉತ್ತರ ಗಡಿಯಿಂದ ಪೂರ್ವಕ್ಕೆ ಚಲಿಸಿ ಸ.ನಂ. 545, 544ರ ಉತ್ತರ ಗಡಿಯ ಮೂಲಕ ಸಾಗಿ ಗಂಗಸಂದ್ರ ಗ್ರಾಮದ ಗಡಿಯ ಅಂಚಿನಲ್ಲಿರುವ ಸ.ನಂ. 28ರಿಂದ ಗಂಗಸಂದ್ರ ಗ್ರಾಮದ ಗಡಿಯ ಮುಖೇನ ದಕ್ಷಿಣಕ್ಕೆ ಸಾಗಿ ಸ.ನಂ. 29, ನಾಲಾ, 30, 33ರ ಪೂರ್ವ ಗಡಿಯ ಮೂಲಕ ದಕ್ಷಿಣಕ್ಕೆ ಚಲಿಸಿ ಸ.ನಂ. 33ರ ಅಂಚಿನಲ್ಲಿರುವ ನಾಲ ಬಲದಂಡೆಯ ಮೂಲಕ ಸಾಗಿ ಸ.ನಂ. 45ರ ಅಂಚಿನಿಂದ ಪೂರ್ವಕ್ಕೆ ತಿರುಗಿ ಸ.ನಂ. 46ರ ಬಲಭಾಗದ ಗಡಿಯ ಮೂಲಕ ದಕ್ಷಿಣ ಭಾಗಕ್ಕೆ ಚಲಿಸಿ ಸ.ನಂ. 50, 115, 116, 205, 231, 240, 241, 242, 227, 226, 267, 268, 269, 270, 260, 258, 349, 328, 327, 621, 622, 623,624, 625, 626, 627, 628ರ ಬಲಭಾಗದಲ್ಲಿ ಸಾಗಿ ಗ್ರಾಮಗಡಿಯ ಮೂಲಕ ಪಶ್ಚಿಮಕ್ಕೆ ತಿರುಗಿ ಸ.ನಂ. 330, 331, 332, 333ರ ಪಶ್ಚಿಮಕ್ಕೆ ತಿರುಗಿ ಹಿರೇಬಿದನೂರು ಗ್ರಾಮದ ಅಂಚಿನಿಂದ ಸ.ನಂ. 52, 53, 54, 60, 61, 63ರ ದಕ್ಷಿಣ ಎಲ್ಲೆಯ ಮೂಲಕ ಮುಂದುವರೆದು ಮೂರುಮನೆಹಳ್ಳಿ ಗ್ರಾಮದ ಆಗ್ನೇಯ ಅಂಚಿನಿಂದ ಸ.ನಂ. 4, 6, 7, 8, 10, 11ರ ದಕ್ಷಿಣ ಎಲ್ಲೆಯ ಮೂಲಕ ಪಶ್ಚಿಮದಲ್ಲಿ ಸಾಗಿ ನಂತರ ಸ.ನಂ. 13ರ ಪಶ್ಚಿಮ ಎಲ್ಲೆಯ ಮೂಲಕ ಉತ್ತರಕ್ಕೆ ಚಲಿಸಿ ಸ.ನಂ. 21ರ ವಾಯವ್ಯದ ಅಂಚಿನಲ್ಲಿ ದಕ್ಷಿಣಕ್ಕೆ ತಿರುಗಿ ಸ.ನಂ. 11ರಿಂದ ವೀರ್ಲಗೊಲ್ಲಹಳ್ಳಿ ಗ್ರಾಮದ ಸ.ನಂ. 9ರ ಈಶಾನ್ಯದ ಅಂಚಿನಿಂದ ದಕ್ಷಿಣಕ್ಕೆ ತಿರುಗಿ ಸ.ನಂ. 11, 12, 14, 19, 18, 20, 21, 26, 27, 29, 30ರ ಬಲ ಅಂಚಿನಿಂದ ವೀರ್ಲಗೊಲ್ಲಹಳ್ಳಿ ಗ್ರಾಮದ ಗಡಿಯ ಮೂಲಕ ಪಶ್ಚಿಮಕ್ಕೆ ತಿರುಗಿ ಸ.ನಂ. 31, 32, 51, 52ರ ಅಂಚಿನಿಂದ ಗ್ರಾಮ ಗಡಿಯ ಮೂಲಕ ವಾಯವ್ಯಕ್ಕೆ ಚಲಿಸಿ ಸ.ನಂ. 72, 53, 58ರ ಅಂಚಿನಿಂದ ಮಿಟ್ಟೇನಹಳ್ಳಿ ಗ್ರಾಮದ ಸ.ನಂ. 19ರ ಆಗ್ನೇಯ ಭಾಗದಿಂದ ಪಶ್ಚಿಮಕ್ಕೆ ತಿರುಗಿ ಸ.ನಂ. 23, 24, 25, 29, 33, 34 ಹಾಗೂ 1ರ ದಕ್ಷಿಣ ಭಾಗದಲ್ಲಿ ಚಲಿಸಿ ಸ.ನಂ. 1ರ ನೈರುತ್ಯದ ಅಂಚಿನಿಂದ ಮಿಟ್ಟೇನಹಳ್ಳಿ ಗ್ರಾಮದ ಮೂಲಕ ಉತ್ತರಕ್ಕೆ ತಿರುಗಿ ಸ.ನಂ. 3ರ ವಾಯವ್ಯ ಅಂಚಿನಲ್ಲಿ ಗುಂಡಾಪುರ ಗ್ರಾಮದ ಗಡಿಯಲ್ಲಿರುವ ಸ.ನಂ. 16ರ ಆಗ್ನೇಯ ಅಂಚಿನಿಂದ ಪಶ್ಚಿಮಕ್ಕೆ ತಿರುಗಿ ಗುಂಡಾಪುರ ಗ್ರಾಮದ ಗಡಿಯ ಮೂಲಕ ಸ.ನಂ. 17, 18, 19, 60, 61, 62, 63ರ ಮೂಲಕ ಉತ್ತರಕ್ಕೆ ಸಾಗಿ ಸ.ನಂ. 143ರ ಆಗ್ನೇಯ ಅಂಚಿನಿಂದ ಪಶ್ಚಿಮಕ್ಕೆ ತಿರುಗಿ ಸ.ನಂ. 142, 71ರ ದಕ್ಷಿಣದಲ್ಲಿ ಸಾಗಿ ಸ.ನಂ.71ರ ನೈರುತ್ಯ ಮೂಲೆಯಿಂದ ಉತ್ತರಕ್ಕೆ ಸಾಗಿ ಸ.ನಂ. 72, 73ರ ವಾಯವ್ಯದ ಅಂಚಿನಿಂದ ಗ್ರಾಮ ಗಡಿಯ ಮೂಲಕ ಸ.ನಂ. 76, 161, 160, 159, 158, 150, 79, 141ರ ಮೂಲಕ ಉತ್ತರಕ್ಕೆ ಚಲಿಸಿ ಉಡಮಲೋಡು ಗ್ರಾಮಕ್ಕೆ ಸೇರಿದ ಸ.ನಂ. 25ರ ನೈರುತ್ಯದ ಅಂಚಿನಿಂದ ಉತ್ತರಕ್ಕೆ ಚಲಿಸಿ ಉಡಮಲೋಡು ಗ್ರಾಮದ ಗಡಿಯ ಮೂಲಕ ಸ.ನಂ 29, 32, 33, 40, 41, 42, 61ರ ಮೂಲಕ ಸಾಗಿ, ಸ.ನಂ. 61ರ ವಾಯವ್ಯದ ಅಂಚಿನಿಂದ ಈಶಾನ್ಯಕ್ಕೆ ತಿರುಗಿ ಸ.ನಂ. 65, 69, 43, 77ರ ವರೆಗೆ ಸಾಗಿ, ನಂತರ ಕರೇಕಲ್ಲಹಳ್ಳಿ ಗ್ರಾಮದ ಗಡಿಯಲ್ಲಿರುವ ಸ.ನಂ. 178ರ ನೈರುತ್ಯದ ಅಂಚಿನಿಂದ ಉತ್ತರಕ್ಕೆ ತಿರುಗಿ, ಕರೇಕಲ್ಲಹಳ್ಳಿ ಗ್ರಾಮ ಗಡಿಯ ಮೂಲಕ ಸ.ನಂ. 79, 180ರವರೆಗೆ ಚಲಿಸಿ, ಕಲ್ಲೂಡಿ ಗ್ರಾಮದ ಸ.ನಂ. 245ರ ನೈರುತ್ಯದ ಅಂಚಿನಿಂದ ಗ್ರಾಮ ಗಡಿಯ ಮೂಲಕ ಉತ್ತರಕ್ಕೆ ಸಾಗಿ ಸ.ನಂ. 246, 248, 250, 251, 253, 254, 257, 269ರ ಮುಖೇನ ಉತ್ತರ ಪಿನಾಕಿನಿ ನದಿಯನ್ನು ದಾಟಿ ಸ.ನಂ. 415ರ ವಾಯವ್ಯದ ಅಂಚಿನಿಂದ ದಕ್ಷಿಣಕ್ಕೆ ತಿರುಗಿ ನಂತರ ಸ.ನಂ. 293, 294ರ ಉತ್ತರ ಭಾಗದಲ್ಲಿ ಚಲಿಸಿ ನಂತರ ರೇಲ್ವೆ ಹಳಿಯನ್ನು ದಾಟಿ ಸ.ನಂ. 327ರ ಉತ್ತರ ಭಾಗದ ಎಲ್ಲೆಯ ಮೂಲಕ ಪೂರ್ವಕ್ಕೆ ಚಲಿಸಿ ಸ.ನಂ. 330ರ ಉತ್ತರಕ್ಕೆ ಚಲಿಸಿ, ಸ.ನಂ. 331ರ ಉತ್ತರ ಗಡಿಯ ಮೂಲಕ ದಕ್ಷಿಣಕ್ಕೆ ಚಲಿಸಿ ಗೌರಿಬಿದನೂರು – ಗುಡಿಬಂಡೆ ಜಿಲ್ಲಾ ಹೆದ್ದಾರಿಯ ಮೂಲಕ ಸ.ನಂ. 31, 32, 34, 37, 44, 46, 47, 125, 124, 91, 90, 455, 456, 457, 458, 459ರ ಉತ್ತರ ಭಾಗದ ಗಡಿಯ ಮೂಲಕ ಸಾಗಿ ಸ.ನಂ. 459ರ ಈಶಾನ್ಯದ ಅಂಚನ್ನು ಸೇರಿ ಗೌರಿಬಿದನೂರು ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯು ಮುಕ್ತಾಯವಾಗುತ್ತದೆ.

ಸಂಖ್ಯೆ: ನಅಇ 34 ಬೆಂರೂಪ್ರಾ 2014

**ಟಿ.ಎಂ. ವಾಸುದೇವ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**PR-161**
**SC - 100**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## IN THE COURT OF METROPOLITAN MAGISTRATE TRAFFIC COURT 2 BANGALORE CITY.

It is hereby notified to the public that the CHICKPET TRAFFIC POLICE Bangalore City have a seized the following vehicles and the same vehicles are lying in the police station, has unclaimed so for. Hence the owners of the vehicles may their claim one month from the date of this publication.

Bangalore City.

DATE: 25.03.2014

METROPOLITAN MAGISTRATE
TRAFFIC COURT-II, BANGALORE CITY.

List of the sezied vehicles are lying in CHICKPET TRAFFIC POLICE STATION which have been sezied with PF No.

| Sl.No | Misl No | PF No | Vehicle No | Vehicle Type | Chassis No | Engine No |
|---|---|---|---|---|---|---|
| 1 | 01/14 | 02/14 | KA-02-A-9532 | Passenger A/R | 24FBDJ34793 | 24MBBDJ61724 |
| 2 | 01/14 | 02/14 | KA-02-B-7159 | Passenger A/R | 24FLM19279 | AEMBLM06448 |
| 3 | 01/14 | 02/14 | KA-02-AA-8590 | Passenger A/R | MDAAAMZZWA0541 | AEMBTA01134 |
| 4 | 02/14 | 03/14 | KA-02-ED-2704 | Suzuki M/C | - | - |
| 5 | 02/14 | 03/14 | KA-22-E-7854 | Knetic Honda S/C | - | - |
| 6 | 02/14 | 03/14 | KA-05-Q-3893 | Knetic Honda S/C | - | - |
| 7 | 03/14 | 04/14 | KA-43-J-2916 | Hero Honda Splender M/C | - | - |
| 8 | 03/14 | 04/14 | KA-02-M-985 | Suzuki M/C | PA543308 | PAFD8411 |
| 9 | 03/14 | 04/14 | KA-03-HA-4310 | Scooty pep S/C | MD626BG3572K63868 | 0G3K72465379 |
| 10 | 03/14 | 04/14 | KA-04-V-9887 | Knetic Honda S/C | NIFRD958069 | NIERD953736 |

**P.R. 222**
**SC - 5**

METROPOLITAN MAGISTRATE
TRAFFIC COURT-II, BANGALORE CITY.

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59